# TRAVEL PAGE

**DUBAI - 5 Days**





**SINGAPORE MALAYSIA THAILAND : 11 Days**



**SRILANKA - 7 Days**





## ಕೋಲ್ಕತ್ತಾ - ಡಾರ್ಜಿಲಿಂಗ್ - ಪೂರಿ : 16 ದಿನಗಳು

**Nov 10 Mar 2015**

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

## ಕಾಶಿ - ಗಯಾ - ಪ್ರಯಾಗ್ : 12 ದಿನಗಳು

**Oct 30**

ಅಲಹಾಬಾದ್, ಗಯಾ, ಬುದ್ಧಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ

## ದ್ವಾರಕ ಮತ್ತು ಅಷ್ಟ ಜ್ಯೋತಿರ್ಲಿಂಗ : 24 ದಿನಗಳು

**Oct 27, Nov 17**

ಪುಷ್ಕರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ಶಿರಡಿ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್

## ದಕ್ಷಿಣ ಭಾರತ : 10 ದಿನಗಳು

**Nov 24**

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕೋವಲಂ ಬೀಚ್, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ತಿರುಚಿ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ ದೇವಸ್ಥಾನಗಳು



# ಶ್ರೀ ಹನ್ಸಾ ಟ್ರಾವೆಲ್ಸ್

# SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.

☎: (080) 26543891 / 26643276 Mobile : (0) 9341415612 / 9341215612

e-mail : hansaatravels@gmail.com web : www.hansaatravels.com

ಅಕ್ಟೋಬರ್ 2014 ಸಂಪುಟ 15 ಸಂಚಿಕೆ 10

# ವಿವೇಕಪ್ರಭ






















**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಮುಕ್ತಿದಾನಂದ*

**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಎನ್. ಎಸ್. ಶಾರದಾಪ್ರಸಾದ್*
*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



**E-mail:**
vivekaprabha@hotmail.com
kannada.vivekaprabha@gmail.com
Website: vivekaprabha.net
**ಫೋನ್** : 9481533505


**ಮುಖಪುಟ:**
ಮಹಿಷಾಸುರ ಮರ್ದಿನಿ,
ಹಳೇಬೀಡು

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ

**ಚಂದಾ ವಿವರ :** ಬಿಡಿ ಪ್ರತಿ: ₹ 14; ವಾರ್ಷಿಕ: ₹ 140; ಮೂರು ವರ್ಷ: ₹ 375; ಆಜೀವ (25 ವರ್ಷ): ₹ 3,000; ಪೋಷಕ ಸಹಾಯಧನ: ₹ 5,000 ಅಥವಾ ಹೆಚ್ಚು. ವಿದೇಶಗಳಿಗೆ: (ಏರ್‌ಮೇಲ್): ವಾರ್ಷಿಕ: $20; ಮೂರು ವರ್ಷ: $60; ಆಜೀವ (25 ವರ್ಷ): $300; ಪೋಷಕ ಸಹಾಯಧನ: $600 ಅಥವಾ ಹೆಚ್ಚು.



ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



# ಪ್ರಾರ್ಥನೆ



ಸಿಂಹಸ್ಥಾ ಶಶಿಶೇಖರಾ ಮರಕತಪ್ರಖ್ಯೈಶ್ಚತುರ್ಭಿರ್ಭುಜೈಃ
ಶಂಖಂ ಚಕ್ರಧನುಶ್ಶರಾಂಶ್ಚ ದಧತೀ ನೇತ್ರೈಸ್ತ್ರಿಭಿಶ್ಶೋಭಿತಾ ।
ಆಮುಕ್ತಾಂಗದಹಾರಕಂಕಣರಣತ್ಕಾಂಚೀರಣನ್ನೂಪುರಾ
ದುರ್ಗಾ ದುರ್ಗತಿಹಾರಿಣೀ ಭವತು ನೋ ರತ್ನೋಲ್ಲಸತ್ಕುಂಡಲಾ॥

ಸಿಂಹದ ಮೇಲೆ ಕುಳಿತಿರುವವಳೂ, ಚಂದ್ರನನ್ನು ಮುಕುಟದಲ್ಲಿ ಧರಿಸಿರುವವಳೂ, ಮರಕತಮಣಿಗೆ ಸಮನಾದ ಕಾಂತಿಯುಳ್ಳ ತನ್ನ ನಾಲ್ಕು ಭುಜಗಳಲ್ಲಿ ಶಂಖ-ಚಕ್ರ-ಧನುಸ್ಸು-ಬಾಣಗಳನ್ನು ಧರಿಸಿರುವವಳೂ, ಮೂರು ಕಣ್ಣುಗಳಿಂದ ಶೋಭಿಸುತ್ತಿರುವವಳೂ, ಮುಕ್ತಾಫಲದಿಂದ ಮಾಡಲ್ಪಟ್ಟ ಕೇಯೂರ-ಕಂಕಣಗಳನ್ನು ಧರಿಸಿರುವವಳೂ, ಶಬ್ದ ಮಾಡುತ್ತಿರುವ ಗೆಜ್ಜೆಗಳನ್ನು ಕಟ್ಟಿಕೊಂಡಿರುವವಳೂ, ಹೊಳೆಯುತ್ತಿರುವ ರತ್ನಕುಂಡಲಗಳನ್ನು ಧರಿಸಿರುವವಳೂ ಆದ ದುರ್ಗೆಯು ನಮ್ಮ ದುರ್ಗತಿಗಳನ್ನು ಹೋಗಲಾಡಿಸಲಿ!

ಖಡ್ಗಂ ಚಕ್ರಗದೇಷುಚಾಪಪರಿಘಾನ್ ಶೂಲಂ ಭುಶುಂಡೀಂ ಶಿರಃ
ಶಂಖಂ ಸಂದಧತೀಂ ಕರೈಸ್ತ್ರಿನಯನಾಂ
ಸರ್ವಾಂಗಭೂಷಾऽऽವೃತಾಮ್।
ಯಾಂ ಹಂತುಂ ಮಧುಕೈಟಭೌ ಜಲಜಭೂಸ್ತುಷ್ಟಾವ ಸುಪ್ತೇ ಹರೌ
ನೀಲಾಶ್ಮದ್ಯುತಿಮಾಸ್ಯಪಾದದಶಕಾಂ ಸೇವೇ ಮಹಾಕಾಲಿಕಾಮ್॥

ನೀಲಮಣಿಯಂತೆ ದೇಹಕಾಂತಿಯುಳ್ಳ, ಹತ್ತು ತಲೆಗಳನ್ನೂ ಹತ್ತು ಪಾದಗಳನ್ನೂ ಹೊಂದಿರುವ, ಸರ್ವಾಂಗಗಳಲ್ಲೂ ಒಡವೆಗಳನ್ನು ಧರಿಸಿರುವ, ಖಡ್ಗ ಚಕ್ರ ಗದೆ ಬಾಣ ಬಿಲ್ಲು ಪರಿಘ ಶೂಲ ಭುಶುಂಡಿ ನರಶಿರಸ್ಸು ಶಂಖ ಇವುಗಳನ್ನು ಕೈಗಳಲ್ಲಿ ಹಿಡಿದಿರುವ, ತ್ರಿಲೋಚನೆಯಾದ, ಹರಿಯು ನಿದ್ರಿಸುತ್ತಿದ್ದಾಗ ಮಧುಕೈಟಭರನ್ನು ಕೊಲ್ಲುವುದಕ್ಕಾಗಿ ಯಾವಳನ್ನು ಚತುರ್ಮುಖ ಬ್ರಹ್ಮನು ಪ್ರಾರ್ಥಿಸಿದನೋ ಅಂತಹ, ಮಹಾಕಾಳಿಯನ್ನು ಸೇವಿಸುತ್ತೇನೆ.

# ಸೂಕ್ತಿಪ್ರಭ

ಹೇಗೆ ಕುರುಡನ ಮುಂದೆ ಲಕ್ಷ ಕೋಟಿ ದೀಪಗಳನ್ನು ಬೆಳಗಿದರೂ ಪ್ರಯೋಜನವಿಲ್ಲವೊ, ಹಾಗೆಯೇ ಚಾರಿತ್ರ್ಯವಿಲ್ಲದ ಮನುಷ್ಯ ಬಹಳವಾಗಿ ಶಾಸ್ತ್ರಾಧ್ಯಯನ ಮಾಡಿದರೂ ವ್ಯರ್ಥವೆ.

**-ಮಹಾವೀರ**

ನಾವು ಏನನ್ನಾದರೂ ತಿಳಿಯಬಹುದಾದ ಸಂಗತಿಯೇನೆಂದರೆ, ನಮಗೇನೂ ತಿಳಿದಿಲ್ಲ ಎಂದು. ಅದೇ ಅತ್ಯುನ್ನತವಾದ ವಿವೇಕ.

**-ಲಿಯೋ ಟಾಲ್‌ಸ್ಟಾಯ್**

ನಿನ್ನೆ ನಾನು ಬುದ್ಧಿವಂತನಾಗಿದ್ದೆ, ಆದ ಕಾರಣ ಜಗತ್ತನ್ನು ಬದಲಾಯಿಸಹೊರಟೆ. ಇಂದು ನಾನು ವಿವೇಕಿಯಾಗಿದ್ದೇನೆ, ಆದ್ದರಿಂದ ನಾನೇ ಬದಲಾಗಹೊರಟಿದ್ದೇನೆ.

**-ರೂಮಿ**

ಜ್ಞಾನವೆಲ್ಲ ಆತ್ಮನಿಂದ ಬರುವುದು. ಮಾನವನು ಜ್ಞಾನವನ್ನು ವ್ಯಕ್ತಗೊಳಿಸುವನು. ತನ್ನಲ್ಲಿಯೇ ಅದನ್ನು ಕಂಡುಹಿಡಿಯುವನು. ಅನಂತ ಕಾಲದಿಂದಲೂ ಅದು ಅಲ್ಲಿಯೇ ಇದೆ.

**-ಸ್ವಾಮಿ ವಿವೇಕಾನಂದ**

ಬೇರೆಯವರನ್ನು ಅರಿತುಕೊಳ್ಳುವುದು ಬುದ್ಧಿವಂತಿಕೆ. ನಿನ್ನನ್ನು ನೀನು ಅರಿತುಕೊಳ್ಳುವುದು ನಿಜವಾದ ವಿವೇಕ. ಇತರರನ್ನು ನಿಯಂತ್ರಿಸುವುದು ಬಲ; ನಿನ್ನನ್ನು ನೀನು ನಿಯಂತ್ರಿಸಿಕೊಳ್ಳುವುದು ಶಕ್ತಿ. ನಿನ್ನಲ್ಲಿ ಎಲ್ಲವೂ ಬೇಕಾದಷ್ಟು ಇದೆ ಎಂದು ನೀನು ತಿಳಿದುಕೊಂಡಾಗಲೇ ನೀನು ಶ್ರೀಮಂತ.

**-ಲಾವೋ ತ್ಸು**

ನಮ್ಮನ್ನು ನಾವು ಮೇಲಕ್ಕೆ ಎತ್ತಬೇಕು; ನಮ್ಮನ್ನು ನಾವು ಕುಗ್ಗಿಸಿಕೊಳ್ಳಬಾರದು. ನಾವೇ ನಮ್ಮ ಬಂಧಗಳಾಗುತ್ತೇವೆ, ನಾವೇ ನಮ್ಮ ಶತ್ರುಗಳಾಗುತ್ತೇವೆ.

**-ಭಗವದ್ಗೀತೆ**

ದೈನ್ಯದಿಂದ ಇರುವವರು ಧನ್ಯರು; ದೇವರ ರಾಜ್ಯ ಅವರದು. ತಪ್ಪಿಗಾಗಿ ದುಃಖಿಸುವವರು ಧನ್ಯರು; ಅವರಿಗೆ ಸಮಾಧಾನ ದೊರೆಯುತ್ತದೆ. ವಿನೀತರು ಧನ್ಯರು; ಈ ಭೂಮಿ ಅವರ ದಾಯಭಾಗದ ಸ್ವತ್ತಾಗುತ್ತದೆ.

**-ಯೇಸುಕ್ರಿಸ್ತ**

ವಿದ್ಯೆಗೆ ಸಮವಾದ ಕಣ್ಣು ಇಲ್ಲ. ಸತ್ಯಕ್ಕೆ ಸಮವಾದ ತಪಸ್ಸಿಲ್ಲ. ಆಸಕ್ತಿಗೆ ಸಮವಾದ ದುಃಖವಿಲ್ಲ. ತ್ಯಾಗಕ್ಕೆ ಸಮವಾದ ಸುಖವಿಲ್ಲ.

**-ಮಹಾಭಾರತ**

# ವಿವೇಕಪ್ರಭ

**ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ**

**ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020**



## ಚಂದಾ ಅರ್ಜಿ

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು.....................................................................

ವಿಳಾಸ............................................................................

.......................................................................................

.......................................................ಪಿನ್...........................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು.............................................................................

ವಿಳಾಸ............................................................................

.......................................................................................

.......................................................ಪಿನ್...........................

**ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.**

ವಿವರ.......................................................................

1. ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ

ಬೇಕಾದಷ್ಟನ್ನು ಪುಸ್ತಕ ಓದಿ ತಿಳಿದುಕೊಳ್ಳಬಹುದು. ಆದರೆ ಭಗವಂತನಲ್ಲಿ ಭಕ್ತಿಯಿಲ್ಲದಿದ್ದರೆ, ಆತನ ಸಾಕ್ಷಾತ್ಕಾರ ಪಡೆಯಬೇಕು ಎಂಬ ಇಚ್ಛೆಯಿಲ್ಲದಿದ್ದರೆ ಎಲ್ಲವೂ ವ್ಯರ್ಥ. ವಿವೇಕ ವೈರಾಗ್ಯಗಳಿಲ್ಲದ ಬರಿಯ ವಿದ್ವಾಂಸರ ದೃಷ್ಟಿ ಕಾಮಕಾಂಚನಗಳ ಮೇಲೆ ನೆಲೆಸಿರುತ್ತದೆ. ಹದ್ದು ಬಹಳ ಎತ್ತರಕ್ಕೇನೊ ಹಾರಿಹೋಗುತ್ತದೆ, ಆದರೆ ಅದರ ದೃಷ್ಟಿ ಮಾತ್ರ ಹೆಣದ ಗುಂಡಿಗಳ ಕಡೆಗೇ.

–ಶ್ರೀರಾಮಕೃಷ್ಣ ಪರಮಹಂಸ

ಮನಸ್ಸಿನಲ್ಲೇ ಶುದ್ಧ, ಅಶುದ್ಧ ಎಲ್ಲವೂ. ಮನುಷ್ಯ ತನ್ನ ಮನಸ್ಸನ್ನು ಮೊದಲು ಮಲಿನಗೊಳಿಸಿಬಿಡುತ್ತಾನೆ. ಅದರಿಂದಲೇ ಅವನು ಇತರರ ದೋಷವನ್ನು ನೋಡುತ್ತಾನೆ. ನೀವು ಇತರರ ದೋಷವನ್ನು ನೋಡಿದರೆ ಅವನಿಗೇನಾಗುತ್ತದೆ? ಅದರಿಂದ ನಿಮಗೇ ಹಾನಿಯಾಗುತ್ತದೆ. ಬೇರೆಯವರ ದೋಷವನ್ನು ನೋಡುವುದೆ? ಇತರರ ದೋಷವನ್ನು ನೋಡದಿರುವುದು ಕ್ಷಮಾರೂಪದ ತಪಸ್ಸು.

–ಶ್ರೀಮಾತೆ ಶಾರದಾದೇವಿ

"ಮಾತೃದೇವೋ ಭವ" ತಾಯಿಯನ್ನು ದೇವರಂತೆ ಕಾಣು, ತಂದೆಯನ್ನು ದೇವರಂತೆ ಕಾಣು ಎಂಬುದನ್ನು ನೀನು ಓದಿರುವೆ. ಆದರೆ ನಾನು, "ದರಿದ್ರ ದೇವೋ ಭವ, ಮೂರ್ಖದೇವೋ ಭವ" ಎನ್ನುತ್ತೇನೆ. ದೀನರು, ಅವಿದ್ಯಾವಂತರು, ಮೂಢರು, ದುಃಖಿಗಳೇ ನಿನಗೆ ದೇವರಾಗಲಿ. ಇವರ ಸೇವೆಯನ್ನು ಮಾಡುವುದೇ ಅತ್ಯಂತ ಪವಿತ್ರವಾದ ಧರ್ಮವೆಂದು ತಿಳಿ.

–ಸ್ವಾಮಿ ವಿವೇಕಾನಂದ

## ದುರ್ಗಾಪೂಜೆ ಹಾಗೂ ದೀಪಾವಳಿಯ ಶುಭಾಶಯಗಳು

## ಸಂಪಾದಕೀಯ

# ದೇವೀ ಆರಾಧನೆಯ ನೆಲೆಗಳು

ಪ್ರೀತಿ ಎನ್ನುವುದು ಪರಿಶುದ್ಧವಾದದು. ಅದು ಯಾರ ನಡುವೆಯೇ ಆಗಿರಲಿ, ಯಾವ ಹಂತದಲ್ಲೇ ಇರಲಿ, ಯಾವ ಸನ್ನಿವೇಶದಲ್ಲೇ ಇರಲಿ – ತಾನು, ತನ್ನದು ಎಂಬ ಅಹಂಭಾವವನ್ನು ಮರೆಯುವುದೇ ಪ್ರೀತಿ. ಪ್ರೀತಿಯ ಹೆಸರಿನಲ್ಲಿ ಜಗತ್ತಿ ನಲ್ಲಿ ಕಂಡುಬರುವ ಗೊಂದಲಗಳಿಗೆಲ್ಲ ಕಾರಣ, ಅದನ್ನು ಕುರಿತ ತಪ್ಪುಕಲ್ಪನೆಗಳು, ಅದರೊಂದಿಗೆ ಸ್ವಾರ್ಥ ಅಸೂಯೆ ದ್ವೇಷಗಳನ್ನು ಬೆರೆಸುವುದು ಹಾಗೂ ಅದನ್ನು ಕುರಿತ ಅಜ್ಞಾನ – ಇವು. ಎಲ್ಲಿ ಪ್ರೀತಿ ಬೇರೆ ಏನನ್ನೂ ಬಯಸದೆ, ಕೇವಲ ಪ್ರೀತಿಯನ್ನಷ್ಟೇ ಬಯಸುವುದೋ ಅದೇ ನಿಜವಾದ ಪ್ರೀತಿ. ಇದರೊಂದಿಗೆ ನಮ್ಮ ದೈನಂದಿನ ಜಂಜಾಟದ ನಾನಾ ವ್ಯಾಪಾರಗಳು ಮಿಶ್ರವಾಗದಂತೆ ಕಾಯ್ದುಕೊಳ್ಳಬಲ್ಲವರಿಗೆ ಮಾತ್ರ ಇದರರ್ಥ ತಿಳಿದಿದೆಯೆನ್ನಬೇಕು. ಇನ್ನೊಂದು ರೀತಿ ನೋಡಿದರೆ, ಅಂಥವರು ತಮ್ಮ ದೈನಂದಿನ ಪರಿಸ್ಥಿತಿ, ಕೆಲಸ, ಚಟುವಟಿಕೆಗಳು ಹಾಗೂ ವೈಯಕ್ತಿಕ ಭಾವವೈವಿಧ್ಯಗಳನ್ನೆಲ್ಲ ಪ್ರೀತಿಯ ಪರಿಶುದ್ಧತೆಗೆ ಅನುಗುಣವಾಗಿ ಪರಿವರ್ತಿಸಿಕೊಳ್ಳಬಲ್ಲರು. ಇದು ಲೌಕಿಕ ಜೀವನದ ರೀತಿ.

### ಪ್ರೀತಿಯ ದೈವೀಕರಣ

ಪ್ರೀತಿ ಎಷ್ಟೇ ಪರಿಶುದ್ಧವಾಗಿದ್ದರೂ, ಅದೆಷ್ಟೇ ದೋಷರಹಿತವಾಗಿದ್ದರೂ, ಅಲ್ಲಿ ದೈವೀ ಅಸ್ತಿತ್ವದ ಅರಿವು ಇದ್ದರೆ ಮಾತ್ರ ಅದು ಆಧ್ಯಾತ್ಮಿಕವೆನಿಸುವುದು. ಲೌಕಿಕ ಜೀವನದಲ್ಲಿ ನಾನಾ ಏರುಪೇರುಗಳ ನಡುವೆ, ಮೇಲೆ ಹೇಳಿದ ಪರಿಶುದ್ಧ ಪ್ರೀತಿಯನ್ನು ಕಂಡುಕೊಳ್ಳುವ ಜನರ ಸಂಖ್ಯೆ ಅತ್ಯಂತ ಕಡಿಮೆ; ಆದರೆ ಪ್ರತಿಯೊಬ್ಬರ ಜೀವನದಲ್ಲೂ ಇಂಥ ಪ್ರೀತಿಯ ಕಲ್ಪನೆ ಹಾಗೂ ಅನುಭವ ಒಂದಲ್ಲ ಒಂದು ಹಂತದಲ್ಲಿ ಕಾಣಿಸಿಕೊಳ್ಳುವುದು ಸಹಜ. ಎಷ್ಟು ಜನ ಅದರ ಮೌಲ್ಯವನ್ನರಿತು ಅಂಥ ಪ್ರೀತಿಯ ಲತೆಯನ್ನು ಬೆಳೆಸಿ, ನೀರೆರೆದು ಬದುಕನ್ನು ಸುಂದರ ಹೂವಿನ ಉದ್ಯಾನವನ್ನಾಗಿ ಮಾಡುವರು? ಅಂಥವರನ್ನು ಅರಸಿಕೊಂಡು ಹೋಗಬೇಕಾಗಿದೆ. ಅದೆಷ್ಟೇ ಅಪೂರ್ವವಾಗಿದ್ದರೂ, ಎಷ್ಟೇ ಮಹತ್ವದ್ದಾಗಿದ್ದರೂ ಇನ್ನೂ ಅದು ಲೌಕಿಕ ಪರಿಧಿಯನ್ನು ದಾಟಿ ಹೋಗಿರುವುದಿಲ್ಲ. ಉದಾಹರಣೆಗೆ ಮಾತೃಪ್ರೇಮ. ತಾಯಿ ಮಗುವಿನ ಮೇಲೆ ಹೊಂದಿರುವ ಪ್ರೀತಿ ಲೌಕಿಕ ಬದುಕಿನಲ್ಲಿ ಅತ್ಯಂತ ಪರಿಶುದ್ಧವೆನ್ನುತ್ತಾರೆ. ಜೈವಿಕ, ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಈ ಸಂಬಂಧವನ್ನು ಎಷ್ಟೇ ವಿಶ್ಲೇಷಿಸಿದರೂ, ಎಲ್ಲ ಮಿತಿಗಳನ್ನೂ ಮೀರಿ ನಿಲ್ಲುವ ಮಾತೃವಾತ್ಸಲ್ಯ ಹಾಗೂ ಮಾತೃಪ್ರೇಮ ಅಗೋಚರ ನೆಲೆಯ ದೈವೀಪ್ರೇಮದತ್ತ ಮುಖಮಾಡುತ್ತದೆ. ಈ ಅರ್ಥದಲ್ಲಿ ಈ ಸಂಬಂಧ ಆಧ್ಯಾತ್ಮಿಕ ಭಾವಗಳಿಗೆ ತುಂಬ ಹತ್ತಿರ; ಆದರೆ ಇನ್ನೂ ಇಲ್ಲಿ ದೈವೀ ಅಸ್ತಿತ್ವದ ಅರಿವು ಬಂದಿರುವುದಿಲ್ಲ. ಅಂಥ ಅರಿವು ಬಂದೊದಗಿದಾಗ ಈ ವಾತ್ಸಲ್ಯ, ಪ್ರೇಮದ ಅಸ್ತಿತ್ವ ಅಸಾಧಾರಣವೆಂಬಂತೆ ದೈವೀಕರಿಸಲ್ಪಡುತ್ತದೆ. ಭಗವಂತನನ್ನು ಮಾತೆಯೆಂದು ಪರಿಗಣಿಸಿ ಪೂಜಿಸುವ, ಆಧ್ಯಾತ್ಮಿಕ ಸಾಧನೆಗೆ ಅದೊಂದು ಮಾರ್ಗವೆಂದು ಪರಿಗಣಿಸುವ ಈ ವಿಧಾನ ಅತ್ಯಂತ ಸಹಜವಾದ ವಿಧಾನ; ಅದು ಎಲ್ಲ ದರ್ಶನಗಳಲ್ಲೂ, ಎಲ್ಲ ಪರಂಪರೆಗಳಲ್ಲೂ ಒಪ್ಪಿತವಾದ ವಿಧಾನ. ನಮ್ಮಲ್ಲಿ ಮಾತೃ ಆರಾಧನೆಯು ಅನಾದಿಕಾಲದಿಂದ ಇಂದಿನವರೆಗೆ ಎಲ್ಲೆಡೆ ವ್ಯಾಪಕವಾಗಿ ಆಚರಿಸಲ್ಪಡುವ ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಧಿವಿಧಾನಗಳಲ್ಲಿ ಪ್ರಮುಖವಾಗಿ ನಿಂತಿದೆ. ಆಳವಾದ ತಾತ್ತ್ವಿಕ ಆಯಾಮ ಇದಕ್ಕಿದೆ; ಜೀವನದ ವಿಭಿನ್ನ ನೆಲೆಗಳಲ್ಲಿ ವೈವಿಧ್ಯಮಯವಾದ ಸಾಂಸ್ಕೃತಿಕ ಆಯಾಮವೂ ಇದಕ್ಕಿದೆ. ಎಲ್ಲಕ್ಕಿಂತ ಮುಖ್ಯವಾಗಿ, ಆಚರಣಾತ್ಮಕವಾದ ಆಧ್ಯಾತ್ಮಿಕ ಆಯಾಮವೂ ಇದಕ್ಕಿದೆ.

### ಅಭಯಪ್ರದಾತೆ

ಮಗುವಿನ ಜನನಕ್ಕೂ ಮೊದಲೇ ಆರಂಭವಾಗುವ ಮಾತೃಭಾವ ನಿಜವಾಗಿಯೂ ಸ್ತ್ರೀಯಲ್ಲಿ ಎಂದು ಜಾಗೃತವಾಗುವುದು? ಇದು ಪೂರ್ಣವಾಗಿ ಪ್ರಕಾಶವಾಗುವುದು ಸ್ತ್ರೀಯು ತಾಯಿಯಾದಾಗ ಎಂಬ ಅಂಶ ನಿಜವಿದ್ದರೂ, ಮೂಲತಃ ಈ ಮಾತೃಭಾವ ಮಾನವನ ಅಂತರಂಗದ ಆಳದಲ್ಲಿದೆ. ಸ್ತ್ರೀಪುರುಷ ಭೇದವಿಲ್ಲದೆ ಈ ಭಾವ ಸುಪ್ತರೂಪದಲ್ಲಿರುತ್ತದೆ; ಅದೇ ಭಾವ ತಕ್ಕ ಸನ್ನಿವೇಶ ಒದಗಿಬಂದಾಗ ಪ್ರಕಟಗೊಳ್ಳುತ್ತದೆ. ಆದರೆ ಮಗುವಿನ ಜನ್ಮದಾತೆ ನಿಜವಾಗಿ ಸ್ತ್ರೀಯಾಗಿರುವುದರಿಂದ, ಮಾತೃಭಾವ ಪೂರ್ಣಪ್ರಮಾಣದಲ್ಲಿ ಪ್ರಕಾಶಗೊಳ್ಳುವುದು ಅವಳಲ್ಲಿ ಎನ್ನುವುದು ವಾಸ್ತವ. ಹುಟ್ಟಿದ ಮಗುವಿಗೆ ಏನೂ ತಿಳಿಯದು; ಹಾಗಾಗಿ ಅದರ ಪಾಲನೆ, ಪೋಷಣೆ, ರಕ್ಷಣೆ ತಾಯಿಯ ಜವಾಬ್ದಾರಿ. ಆದರೆ ಈ ಜವಾಬ್ದಾರಿ ಹೊರೆಯಲ್ಲ, ಆಯಾಸದ ಕೆಲಸವಲ್ಲ. ಅದನ್ನೆಲ್ಲ ಅವಳು ಪ್ರೀತಿ, ವಾತ್ಸಲ್ಯಗಳೆಂಬ ವಿಶೇಷ ಭಾವದಿಂದ ಮರೆಯುತ್ತಾಳೆ. ತನ್ನೆಲ್ಲ ಬವಣೆ, ವೇದನೆ, ದುಃಖಗಳನ್ನು ಮರೆತು, ತನ್ನ ಮಗುವಿನ ಮೇಲಿರುವ ಪ್ರೀತಿಯಿಂದ ಅದರ ಎಲ್ಲ ಜವಾಬ್ದಾರಿಯನ್ನೂ ತೆಗೆದುಕೊಳ್ಳುವಂತೆ ಅವಳ ಹೃದಯದಲ್ಲಿ ಭಗವಂತ ನೆಟ್ಟಿರುವ ವಿಶೇಷ ಭಾವವಿದು – ಅದು ಒಂದು ಶಕ್ತಿಯೂ ಹೌದು. ದುರ್ಗಾಸಪ್ತಶತಿಯಲ್ಲಿ ಬರುವ **'ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ। ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥'** ಎಂಬ ಸುಪ್ರಸಿದ್ಧ ಸ್ತೋತ್ರದಲ್ಲಿ ಇಂಥ ವಿಶೇಷ ಶಕ್ತಿ ದೈವಿಕವಾದದ್ದು, ಜಗನ್ಮಾತೆಯೇ ಸಾಕ್ಷಾತ್ತಾಗಿ ಈ ಮಾತೃಭಾವದ ರೂಪದಲ್ಲಿ ನೆಲೆಸಿದ್ದಾಳೆ ಎಂಬ ವಿವರಣೆಯಿದೆ.



ಜಗನ್ಮಾತೆಯು ಅಭಯಪ್ರದಾತೆ ಎಂದು ಎಲ್ಲೆಡೆ ಕರೆಯಲ್ಪಟ್ಟಿದ್ದಾಳೆ. ಮಗುವನ್ನು ಸಂಪೂರ್ಣವಾಗಿ ರಕ್ಷಿಸುವ, ಸಾಕಿ ಸಲಹುವ ಜವಾಬ್ದಾರಿ ಹೇಗೆ ತಾಯಿಯದ್ದೋ, ಅದೇ ರೀತಿ ಜಗತ್ತಿನ ತಾಯಿಯಾಗಿರುವ ಭಗವತಿಯು ಜಗತ್ತಿನ ಎಲ್ಲ ಜೀವಿಗಳನ್ನೂ, ಸ್ಥಾವರ-ಜಂಗಮಾತ್ಮಕವಾದ ಇಡೀ ಪ್ರಪಂಚವನ್ನೂ ಪಾಲಿಸುತ್ತಾಳೆ ಹಾಗೂ ಪೋಷಿಸುತ್ತಾಳೆ ಎನ್ನಲಾಗಿದೆ. ಇಲ್ಲಿ ತಾಯಿಗಿರುವ ಅಸಾಧಾರಣ ಜವಾಬ್ದಾರಿ ಅತ್ಯಂತ ಮುಖ್ಯವಾಗಿದೆ. ತನ್ನ ಮಕ್ಕಳ ಹಿತಕ್ಕಾಗಿ, ಅವುಗಳ ಸುಖಕ್ಕಾಗಿ ತಾಯಿ ಎಂಥ ತ್ಯಾಗವನ್ನಾದರೂ ಮಾಡಬಲ್ಲಳು. ಜಗನ್ಮಾತೆ ಕೂಡ ಅದೇ ರೀತಿ, ತನ್ನನ್ನೇ ಆಶ್ರಯಿಸಿರುವ ಭಕ್ತನ ಉದ್ಧಾರಕ್ಕಾಗಿ ಎಂಥ ತೊಂದರೆಯನ್ನಾದರೂ ಸಹಿಸಬಲ್ಲಳು. ಒಂದು ರೀತಿಯಲ್ಲಿ ಅಭಯಪ್ರದಾನ ಎಂದರೆ ಇದೇ. ಇಡೀ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಳಾಗಿರುವ ಆದಿಶಕ್ತಿ ಎಂಥ ಸಂದರ್ಭದಲ್ಲೂ ತನ್ನ ಕೈಬಿಡಲಾರಳು ಎಂಬ ನಂಬಿಕೆ ಭಕ್ತನಲ್ಲಿ ಸ್ಥಿರವಾಗಿರುವ ತನಕ ಅವನಿಗೆ ಯಾವುದೇ ಭಯವಿಲ್ಲ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ: "ನನ್ನ ತಾಯಿ! ಯಾರು ನನ್ನ ತಾಯಿ? ಓ, ಆಕೆ ಜಗಜ್ಜನನಿ. ಈ ಜಗತ್ತನ್ನು ಸೃಷ್ಟಿಸಿರುವವಳು, ಪಾಲಿಸುತ್ತಿರುವವಳು ಅವಳೇ. ಅವಳೇ ಸರ್ವದಾ ತನ್ನ ಮಕ್ಕಳನ್ನು ನೋಡಿಕೊಳ್ಳುತ್ತಿರುತ್ತಾಳೆ. ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳಲ್ಲಿ ಯಾವುದು ಯಾರಿಗೆ ಬೇಕಾದರೂ ಅದನ್ನು ಅವರಿಗೆ ಕೊಡುತ್ತಾಳೆ." *(ವಚನವೇದ, ಸಂ.೧, ಪು.೩೧೩)*

ಭಕ್ತನಲ್ಲಿ ತಾನು ಜಗನ್ಮಾತೆಯ ಶಿಶು ಎಂಬ ಮಾತೃಭಾವ ಅತ್ಯಂತ ಪವಿತ್ರವಾದ ಆಧ್ಯಾತ್ಮಿಕ ಭಾವನೆಯೆಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಸಾಧಕನು ಭಗವಂತನನ್ನೇ ಸಂಪೂರ್ಣ ಆಶ್ರಯಿಸಿ, ಸಾಕ್ಷಾತ್ಕಾರವಾಗುವ ತನಕವೂ ತಾಯಿ ತನ್ನನ್ನು ನೋಡಿಕೊಳ್ಳುವಳು ಎಂಬ ಭರವಸೆ ಹೊಂದಿದ್ದರೆ ಅವನ ಸಾಧನೆಯೂ ನಿರಾತಂಕವಾಗಿ ಮುಂದುವರೆಯುವುದು. ಹೀಗೆ ಮುಂದುವರೆಯುವ ಸಾಧಕನಿಗೆ ಜಗನ್ಮಾತೆ ತಾನಾಗಿಯೇ ಮಾಯೆಯ ಪರದೆಯನ್ನು ಸರಿಸಿ ಭಗವದ್ದರ್ಶನ ಮಾಡಿಸುವಳು ಎಂದು ಅವರು ಹೇಳುತ್ತಾರೆ.

## ಅನ್ಯಥಾ ಶರಣಂ ನಾಸ್ತಿ

ಭಗವತ್ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸುವ ಸಾಧಕನಿಗೆ ಹಲವು ವಿಧಾನಗಳಿವೆ; ಅವುಗಳಲ್ಲಿ ಪ್ರಮುಖವಾದ ಒಂದು ಮಾರ್ಗ ಭಕ್ತಿಮಾರ್ಗ. ಭಾವಪ್ರಧಾನವಾದ ಈ ಮಾರ್ಗದಲ್ಲಿ ಭಕ್ತನು ಒಂದು ಭಾವವನ್ನು ಆಧರಿಸಿಕೊಂಡು, ತನ್ನೆಲ್ಲ ಜೀವನವನ್ನೂ ಅದಕ್ಕನುಗುಣವಾಗಿ ರೂಪಿಸಿಕೊಂಡು ಭಕ್ತಿಯನ್ನು ಬೆಳೆಸಿಕೊಳ್ಳಬೇಕು. ದಾಸ್ಯಭಾವ, ಸಖ್ಯಭಾವ, ಮಾತೃಭಾವ, ಸಂತಾನಭಾವ, ಮಧುರಭಾವ– ಹೀಗೆ ಅನೇಕ ಬಗೆಯ ಭಾವಗಳಿವೆ. ಸಾಧಕನ ಮನಸ್ಥಿತಿಗೆ ಅನುಕೂಲವೆನಿಸುವ ಒಂದು ಭಾವವನ್ನು ತನ್ನ ಮೇಲೆ ಆರೋಪಿಸಿಕೊಂಡು, ಆ ಭಾವಕ್ಕೆ ಅನುಗುಣವಾಗಿ ಭಗವಂತನನ್ನು ತನ್ನ ಒಡೆಯನೆಂದೋ, ಸ್ನೇಹಿತನೆಂದೋ, ಶಿಶುವೆಂದೋ, ತಾಯಿಯೆಂದೋ ಅಥವಾ ಪ್ರಿಯಕರನೆಂದೋ ಅವನು ಭಾವಿಸಿಕೊಳ್ಳುತ್ತಾನೆ. ಅದಕ್ಕೆ ತಕ್ಕಂತೆ ಭಗವಂತನೊಂದಿಗೆ ಆತ್ಮೀಯವಾದ ಸಂಬಂಧವನ್ನು ಬೆಳೆಸಿ, ಆ ಬಗೆಯ ಭಾವದಲ್ಲಿ ತನ್ನೆಲ್ಲ ಸಾಧನೆಯನ್ನು ವಿಲೀನಗೊಳಿಸುತ್ತಾನೆ. ಹೀಗೆ ಮುಂದುವರಿಯುತ್ತಾ ಸಾಧಕನು ಹಂತಹಂತವಾಗಿ ಭಗವಂತನಲ್ಲಿ ಭಕ್ತಿಯನ್ನು ಬೆಳೆಸಿಕೊಂಡು ಸಾಕ್ಷಾತ್ಕಾರವನ್ನು ಹೊಂದುವನು. ಭಕ್ತಿಶಾಸ್ತ್ರಗಳಲ್ಲಿ ಹೇಳಿರುವ ಈ ಬಗೆಯ ಸಾಧನೆಯನ್ನು ಹಲವು ಮಂದಿ ಸಾಧಕರು ಅನುಸರಿಸಿ, ಗುರಿ ತಲುಪಿದ್ದನ್ನು ನಮ್ಮ ಭಕ್ತಿಪರಂಪರೆ ದಾಖಲಿಸಿದೆ.

ಭಗವಂತನನ್ನು ತಾಯಿಯೆಂದು ತಿಳಿದು ಆರಾಧಿಸುವ ಪರಂಪರೆ ನಮ್ಮಲ್ಲಿ ಅತ್ಯಂತ ಪ್ರಾಚೀನ. ವೇದಗಳಲ್ಲೇ ಇದರ ಕುರುಹುಗಳಿವೆ; ಮುಂದೆ ಇತಿಹಾಸ ಪುರಾಣಗಳಲ್ಲೂ, ತಂತ್ರ-ದರ್ಶನಗಳಲ್ಲೂ ಈ ಭಾವ ವಿಕಾಸಹೊಂದಿ, ನಾನಾ ರೀತಿಯ ಆರಾಧನೆಯ ಕ್ರಮಗಳಾಗಿ ರೂಪತಾಳಿದವು. ಈ ಭಾವದಲ್ಲಿ ಭಕ್ತನದು ಸಂತಾನಭಾವ; ಜಗನ್ಮಾತೆಯಲ್ಲೇ ಸರ್ವಸ್ವವನ್ನೂ ಕಾಣುವ, ಅವಳಲ್ಲೇ ತನ್ನ ಸರ್ವಸ್ವವನ್ನೂ ಅರ್ಪಿಸುವ ಸಮರ್ಪಣ ಭಾವ. ಶ್ರೀರಾಮಕೃಷ್ಣರು ಹೇಳುವಂತೆ, ಇದು ಅತ್ಯಂತ ಪವಿತ್ರವಾದ ಭಾವನೆ. ಇಲ್ಲಿ ಸ್ವಾರ್ಥ, ಅಹಂಕಾರಗಳ ಸ್ಪರ್ಶ ಕಿಂಚಿತ್ತೂ ಇಲ್ಲ. ತನ್ನ ತಾಯಿಯೇ ಜಗನ್ಮಾತೆ ಹಾಗೂ ಜಗದ್ರಕ್ಷಕಿಯಾಗಿರುವುದರಿಂದ ತನಗೆ ಯಾವುದೇ ಭಯವಿಲ್ಲ, ಯಾವುದೇ ಆತಂಕವಿಲ್ಲ. ಅವಳು ಹೇಗೆ ನಡೆಸಿಕೊಂಡು ಹೋಗುತ್ತಾಳೋ ಹಾಗೆ, ಹೇಗೆ ದಾರಿ ತೋರಿಸುತ್ತಾಳೋ ಹಾಗೆ – ತನ್ನ ಕೆಲಸ ಕೇವಲ ಅವಳನ್ನು ಕರೆಯುತ್ತಾ ಹೋಗುವುದು. ಇಂತಹ ನಿರ್ಭರತೆಯನ್ನು ಶ್ರೀರಾಮಕೃಷ್ಣರಲ್ಲೂ, ಶ್ರೀಮಾತೆಯವರಲ್ಲೂ ಕಾಣಬಹುದು; ರಾಮಪ್ರಸಾದ, ಕಮಲಾಕಾಂತ ಮೊದಲಾದ ಬಂಗಾಳದ ಸಂತರಲ್ಲೂ ಕಾಣಬಹುದು. ತನ್ನೆಲ್ಲ ಭಾರವನ್ನೂ ಜಗನ್ಮಾತೆಯ ಮೇಲೆ ಹೊರಿಸಿ, ತಾನು ನಿಶ್ಚಿಂತನಾಗಿ ಅವಳನ್ನು ಪ್ರಾರ್ಥಿಸುವ ಈ ಬಗೆಯ ಸಾಧನೆ ತಾಂತ್ರಿಕ ಸಾಧನೆಯ ವಿಧಾನವೂ ಆಗಿದೆ; ಅಲ್ಲಿ ಹಲವು ಬಗೆಯ ಆಚರಣೆಗಳ ನಡುವೆ ಈ ಭಾವ ಅತಿಮುಖ್ಯವಾಗಿ ಇರಬೇಕಾದದ್ದು; ಇದನ್ನು ಮರೆತ ಸಾಧಕರು ದಾರಿ ತಪ್ಪುವ ಸಾಧ್ಯತೆಯಿದೆ ಎಂದು ಶ್ರೀರಾಮಕೃಷ್ಣರು

ಹೇಳುತ್ತಾರೆ. ತಾಂತ್ರಿಕ ಸಾಧನೆಯ ಸಾರವಾದ ಈ ಮಾತೃಭಾವದ ಉಪಾಸನೆಯನ್ನು ಉಳಿದ ಅನಗತ್ಯವೆನಿಸುವ ಆಚರಣೆಗಳಿಂದ ಬೇರ್ಪಡಿಸಿ, ಶುದ್ಧವಾದ ಭಕ್ತಿಮಾರ್ಗಕ್ಕೆ ಅದು ಅನುಕೂಲವಾಗುವಂತೆ ಅವರು ಮಾರ್ಪಡಿಸಿದರು. ಶ್ರೀರಾಮಕೃಷ್ಣರ ನವೀನ ದೃಷ್ಟಿ ಹಾಗೂ ನೂತನ ಭಾವ–ಭಕ್ತಿಯ ವಿಧಾನ ಅನೇಕ ಸಾಧಕರ ಬದುಕಿಗೆ ಹೊಸ ಪ್ರೇರಣೆಯನ್ನು ನೀಡಿತು.

## ಮಾಯಾವಿಲಾಸ

ಮಾತೃ ಆರಾಧನೆಯು ಕೇವಲ ಒಂದೇ ಭಾವಕ್ಕೆ ಸೀಮಿತವಾಗದೆ, ಅನೇಕ ಸನ್ನಿವೇಶಗಳಲ್ಲಿ ಹಲವು ಸಾಧಕರ ದರ್ಶನ, ಅನುಭವ, ಭಾವನೆಗಳಿಗೆ ಅನುಗುಣವಾಗಿ ವೈವಿಧ್ಯಮಯವಾದ ರೂಪಗಳನ್ನು ಪಡೆಯಿತು. ಸಾತ್ವಿಕ ಜನರ, ಭಕ್ತರ, ಉತ್ತಮರ ರಕ್ಷಕಳಾದ ದೇವಿಯು ದುಷ್ಟರ ವಧೆಗಾಗಿ ಅನೇಕ ರೂಪಗಳನ್ನು ತಾಳಿದಳು ಎಂಬ ಕಥಾನಕದ ಹಿನ್ನೆಲೆಯಲ್ಲಿ ಹಲವು ಆವಿರ್ಭಾವಗಳ ಆರಾಧನೆ ಅಸ್ತಿತ್ವಕ್ಕೆ ಬಂತು. ಹೀಗೆ ದೇವಿಯ ರೂಪ ದುರ್ಗೆ (ಹಾಗೂ ನವದುರ್ಗೆ), ಕಾಳಿ, ಮಹಿಷಾಸುರಮರ್ದಿನಿ, ಚಾಮುಂಡಿ, ಶಾಂಭವಿ, ಮೊದಲಾಗಿ ಅಭಿವ್ಯಕ್ತವಾದವು. ಇದಲ್ಲದೆ ಪೌರಾಣಿಕ ಕಥೆಗಳ ಹಿನ್ನೆಲೆಯಿಂದ ಪಾರ್ವತಿ, ಲಕ್ಷ್ಮಿ, ಸರಸ್ವತಿಯೇ ಮೊದಲಾದ ದೇವತೆಗಳೂ, ತಾಂತ್ರಿಕ ಹಿನ್ನೆಲೆಯಿಂದ ಸಪ್ತಮಾತೃಕೆ, ದಶಮಹಾವಿದ್ಯಾ ಮೊದಲಾದ ರೂಪಗಳೂ ವಿವಿಧ ಕಡೆ ಪೂಜಿಸಲ್ಪಡುತ್ತಿವೆ. ಇಷ್ಟು ವೈವಿಧ್ಯಮಯವಾದ ಆವಿರ್ಭಾವಗಳು ಯಾವ ಕಾರಣಕ್ಕಾಗಿ ರೂಪ ತಳೆದಿರಬಹುದು? ಬಹುಶಃ ಸಾಧಕನ ಚಿತ್ತಚಾಂಚಲ್ಯದಲ್ಲಿ ನರ್ತನಗೈಯುವ ಭಾವವಿಲಾಸಗಳು ಅರ್ಥಶೂನ್ಯವಾದ ನೆಲೆಗಳಲ್ಲಿ ಸಂಚರಿಸಿ, ಅವನು ಮತ್ತೆ ಮತ್ತೆ ಅವಿದ್ಯೆಯ ಸರಪಣಿಯಲ್ಲಿ ಬಂಧಿತನಾಗುವ ಗತಿಯನ್ನು ತಪ್ಪಿಸಲು, ಮತ್ತೆ ಅವನ ಭಾವನೆಗಳನ್ನು ಒಂದು ದಿವ್ಯವಾದ ವರ್ಣಮಯ ಜಗತ್ತಿಗೆ ಎಳೆದೊಯ್ದು, ಅಲ್ಲಿ ಅದೇ ಭಾವವಿಲಾಸದಿಂದ ಭಗವತಿಯತ್ತ ಒಮ್ಮುಖಗೊಳಿಸುವ ಒಂದು ಪ್ರಕ್ರಿಯೆ ಇದಾಗಿರಬೇಕು. ಬಾಹ್ಯಜಗತ್ತಿನ ಲೀಲಾಸೌಂದರ್ಯವನ್ನು ಭಗವದಭಿಮುಖಗೊಳಿಸುವ ಕ್ರಿಯಾವಿಧಾನ ತಂತ್ರಶಾಸ್ತ್ರ ಹಾಗೂ ತಾಂತ್ರಿಕ ವಿಧಿವಿಧಾನಗಳ ಅತ್ಯದ್ಭುತವಾದ ಒಂದು ಮಾರ್ಗ. ಈ ವಿಧಾನದ ಸರಿಯಾದ ಆಚರಣೆ ಸಾಧಕನ ಮನಸ್ಸನ್ನು ಆಧ್ಯಾತ್ಮಿಕ ಔನ್ನತ್ಯದತ್ತ ಒಯ್ಯುತ್ತದೆ; ಕರ್ಮಬಂಧನದಿಂದ ಬಿಡಿಸಲು ಅಗತ್ಯವಾದ ದೈವೀಕೃಪೆಗೆ ಕಾರಣೀಭೂತವಾಗುತ್ತದೆ. ವೇದಾಂತದ ತಾತ್ತ್ವಿಕ ಏಕತೆ ಹಾಗೂ ಭಕ್ತಿಮಾರ್ಗದ ಭಾವಾಭಿವ್ಯಕ್ತಿ ಇವೆರಡನ್ನೂ ಮೇಳೈಸಿಕೊಂಡಿರುವ ಈ ಆರಾಧನಾಕ್ರಮ ಇಲ್ಲಿ ಪರಿಪಕ್ವವಾಗುವುದು. ಆಧ್ಯಾತ್ಮಿಕ ಸಾಧನೆಗೆ ಈ ಎಲ್ಲ ಅಭಿವ್ಯಕ್ತಿಗಳು, ಅವುಗಳನ್ನು ಅನುಸರಿಸುವ ವಿಧಿವಿಧಾನ–ಆಚರಣೆಗಳು ಸಹಾಯಕ; ಆದರೆ ಭಾವವೈವಿಧ್ಯವು ಭಾವಾತಿರೇಕವಾಗದಂತೆ, ಭಕ್ತಿಯ ಅಭಿವ್ಯಕ್ತಿ ಭಾವುಕತೆಯಾಗದಂತೆ ವಿವೇಕಪೂರ್ಣವಾದ ಎಚ್ಚರವಿರಬೇಕಾದುದು ಸಾಧಕನಿಗೆ ಅನಿವಾರ್ಯ. ಸ್ವಾಮಿ ವಿವೇಕಾನಂದರು ಜ್ಞಾನ–ಭಕ್ತಿ ಮಾರ್ಗಗಳ ಇತಿಮಿತಿಯನ್ನು ಕುರಿತು ಹೇಳುವಾಗ ಈ ಅಂಶವನ್ನು ಸ್ಪಷ್ಟವಾಗಿ ನುಡಿದಿದ್ದಾರೆ.

## ಭವ್ಯತೆಯ ಪರಾಕಾಷ್ಠೆ

ಧಾರ್ಮಿಕ ಹಾಗೂ ಆಧ್ಯಾತ್ಮಿಕ ಪರಿಧಿಯಾಚೆ ನಿಂತು ನೋಡುವಾಗ ಮಾತೃ ಆರಾಧನೆಯ ಅನೇಕ ಬಗೆಗಳು ವಿಚಿತ್ರವೆಂದು ಕಾಣಿಸುವುವು; ಅನೇಕವೇಳೆ ಅವು ತೀರ ಪ್ರಾಕೃತವೆನ್ನಿಸುವುವು. ಆದರೆ ಆಚರಣೆ, ವಿಧಿ ವಿಧಾನ, ದೇವತಾಮೂರ್ತಿ, ಪೌರಾಣಿಕ ಕಥಾನಕ – ಈ ಬಾಹ್ಯರಚನೆಗಳಿಂದ ಮಾತ್ರ ಮಾತೃ ಆರಾಧನೆಯನ್ನು ಅಳೆಯಲಾಗದು. ಇವುಗಳ ಆಳದಲ್ಲಿ ಮಾನವನ ಭಾವನಾಪ್ರಪಂಚವಿದೆ. ತರ್ಕ, ಚಿಂತನೆ, ತತ್ತ್ವಗಳನ್ನು ಅವಲಂಬಿಸಿ ವಿಶ್ಲೇಷಣಾತ್ಮಕವಾದ ಪಥದಲ್ಲಿ ಮುನ್ನಡೆಯುವ ಸಾಧಕನಿಗೂ ದೈವೀಶಕ್ತಿಯ ಕೃಪೆಯಿಂದ ಚೈತನ್ಯ ದೊರೆಯಬೇಕು; ಅದೇ ರೀತಿ ಮುಗ್ಧಭಕ್ತಿಯನ್ನು ನಿವೇದಿಸಿಕೊಳ್ಳುವ ಪಾಮರರಿಗೂ, ಭಕ್ತಿಪರವಾದ ಆಚರಣೆಗಳೊಂದಿಗೆ ದೇವರನ್ನು ಪ್ರಾರ್ಥಿಸುವ ಭಕ್ತನಿಗೂ ಈ ಅಗೋಚರ ಶಕ್ತಿಯ ಬೆಂಬಲ ಬೇಕು. ಪ್ರಾಮಾಣಿಕವಾದ ಶ್ರದ್ಧೆ, ಅನನ್ಯ ಶರಣಾಗತಿ, ದೇವರು ಮಾತ್ರವೇ ಎಲ್ಲವನ್ನೂ ನಡೆಸುವವನು ಎಂಬ ವಿಶ್ವಾಸ – ಇವು ಅಂತರಂಗದಲ್ಲಿ ತುಂಬಿಕೊಂಡಿರುವ ಸಾಧಕನು ಆಚರಿಸುವ ಎಲ್ಲ ಬಗೆಯ ಧಾರ್ಮಿಕ, ಆಧ್ಯಾತ್ಮಿಕ ಚಟುವಟಿಕೆಗಳಿಗೂ ವಿಶೇಷವಾದ ಒಂದು ಅರ್ಥವಿದೆ. ಅದು ಅವನ ಜೀವನವನ್ನು ರೂಪಿಸುವ ಅಂಶ. ಆದ್ದರಿಂದ ಇವನ್ನೆಲ್ಲ ಗಮನಿಸುವ ದೃಷ್ಟಿಕೋನದಲ್ಲಿ ಸೂಕ್ಷ್ಮವಾದ ಮತ್ತು ವಿಶಾಲಭಾವದ ಗ್ರಹಿಕೆ ಇರಬೇಕು.

ಮಾತೃ ಆರಾಧನೆ ಮಾನವ ಭಾವನೆಗಳನ್ನು ವಿಸ್ತರಿಸುತ್ತ ಸಾಗಿತು. ಅಲ್ಲಿ ರೂಪವೈವಿಧ್ಯ, ವರ್ಣವೈವಿಧ್ಯ, ಭಾವವೈವಿಧ್ಯಗಳೊಂದಿಗೆ ಅಂತಃಕರಣಪೂರ್ವಕವಾದ ನಿಷ್ಠಾಭಕ್ತಿ, ಕಲಾಪೂರ್ಣವಾದ ಆತ್ಮನಿವೇದನೆ ಒಂದು ಬಗೆಯ ಸಹಜ ಅಭಿವ್ಯಕ್ತಿಗೆ ದಾರಿ ಮಾಡಿತು. ಆದರೆ ಇದರಾಚೆಗೂ ಇರಬಹುದಾದ ಅಕ್ಷತಭೂಮಿಯನ್ನು ಅರಸುವ ಧೈರ್ಯಮಾಡಿದ ಸಾಧಕನಿಗೆ ಗೋಚರವಾದದ್ದು ಅಸಾಧಾರಣ ಸೌಂದರ್ಯವನ್ನು ಹೊತ್ತ ಭವ್ಯಜಗತ್ತು – ಅದೇ ಎಲ್ಲ ವೈಪರೀತ್ಯಗಳ, ಎಲ್ಲ ವೈರುಧ್ಯಗಳ ಸಮತೋಲನದ ಜಗತ್ತು. ಕೇವಲ ಶುಭ್ರ, ಸ್ವಚ್ಛ, ಸಾತ್ವಿಕ ಹಾಗೂ ಒಳಿತಿನ ಕಡೆಗೇ ಮುಖಮಾಡಿದ ಮಾನವಮನಸ್ಸು ಅದಕ್ಕೆ ವಿರುದ್ಧವಾದ ಬೀಭತ್ಸಕರವಾದ, ರೌದ್ರಭಯಾನಕವಾದ, ಅಸಹ್ಯ ಮೂಡಿಸುವ ಭಾವಗಳತ್ತ ಮುಖ ತಿರುಗಿಸುವುದೇಕೆ? ಸತ್ಯವೆನ್ನುವುದು ನಿರ್ದಾಕ್ಷಿಣ್ಯ ಹಾಗೂ ಕಠೋರ; ಎಲ್ಲ ದ್ವಂದ್ವಗಳಲ್ಲಿ ಅದು ಏಕತೆಯನ್ನು ಕಾಣಬೇಕು. ಹಾಗಾಗಿ ಈ ಅಹಿತಕರವಾದ ಭೀಕರ ಭಾವನೆಗಳಲ್ಲೂ ಅದೇ ದೈವಿಕತೆಯ ಅಭಿವ್ಯಕ್ತಿಯಲ್ಲವೆ ಇರುವುದು? ಎರಡನ್ನೂ ಸಮಾನವಾಗಿ

ಕಾಣುವ, ಧೈರ್ಯವಾಗಿ ಸ್ವೀಕರಿಸುವ ಮನಸ್ಸು ಸತ್ಯದ ಯಥಾರ್ಥ ಮುಖವನ್ನು ದರ್ಶಿಸಬಲ್ಲದು. ಅವನೇ ಜಗನ್ಮಾತೆಯ, ಮಾಯೆಯ ಅಗೋಚರ ಸತ್ಯವನ್ನು ಅರಿತುಕೊಳ್ಳಬಲ್ಲ. ಅವನಿಗೆ ಜನ್ಮ–ಮೃತ್ಯು, ಸುಖ–ದುಃಖ, ಒಳಿತು–ಕೆಡುಕು ಎಂಬ ದ್ವಂದ್ವಗಳಿಲ್ಲ; ಎರಡನ್ನೂ ಮೀರಿದ ನಿತ್ಯದ ನೆಲೆಯನ್ನು ಅವನು ತಿಳಿಯುವನು. ಇದು ಕಾಳೀ ಉಪಾಸನೆಯ ಹಿಂದಿರುವ ತತ್ತ್ವ. ರೌದ್ರಮುಖದಿಂದ ಭೀಕರಾಕಾರ ತಾಳಿ ನಿಂತ ಕಾಳೀಮಾತೆಯ ಮುಖದಲ್ಲಿ ಶ್ರೀರಾಮಕೃಷ್ಣರು ಶಾಂತಿ, ಸತ್ಯ, ಕರುಣೆಗಳು ಹೆಪ್ಪುಗಟ್ಟಿರುವುದನ್ನು ಕಂಡರು. ಇದೇ ತತ್ತ್ವವನ್ನು ಸ್ವಾಮಿ ವಿವೇಕಾನಂದರು ತಮ್ಮ 'Kali the Mother' ಎಂಬ ಕವನದಲ್ಲಿ ಸೆರೆಹಿಡಿದಿದ್ದಾರೆ. ಆಧ್ಯಾತ್ಮಿಕ ಅನುಭೂತಿ ತನ್ನ ಅನಿರ್ವಚನೀಯವಾದ ಸೌಂದರ್ಯವನ್ನು ಅತ್ಯಂತ ಭವ್ಯವಾದ ಭಾಷೆಯಲ್ಲಿ ಹಿಡಿದಿಟ್ಟಿರುವುದು ಇಂತಹ ಭಾವಾಭಿವ್ಯಕ್ತಿಯಲ್ಲಿ:

*'ನಿನ್ನ ಹೆಸರು ಕರಾಳಿ. ನಿನ್ನ ಉಚ್ಛ್ವಾಸ ನಿಶ್ವಾಸಗಳಲ್ಲಿ ಮೃತ್ಯುವಿದೆ. ನಿನ್ನ ಭೀಮ ಚರಣಗಳ ಒಂದು ಅಡಿ ಒಂದು ಪ್ರಪಂಚವನ್ನೇ ನಾಶಮಾಡುವುದು. ಕಾಳಿ! ಸರ್ವ ಭಕ್ಷಕಳು ನೀನು; ಬಾ ತಾಯಿ, ನನ್ನೆಡೆಗೆ ಬಾ!*

*'ಯಾರಿಗೆ ದುಃಖವನ್ನು ಪ್ರೀತಿಸಿ ಮೃತ್ಯುವನ್ನೇ ಅಪ್ಪಿಕೊಳ್ಳುವ ಸಾಹಸವಿದೆಯೋ, ಯಾರು ಅವಳ ಪ್ರಳಯ ನಾಟ್ಯದಲ್ಲಿ ಭಾಗಿಯಾಗಬಲ್ಲರೋ, ಅವರ ಸಮೀಪಕ್ಕೆ ತಾಯಿ ಬರುವಳು.'*

ಬೆಟ್ಟದ ತುದಿಯಲ್ಲಿ ಬಿದ್ದ ಮಳೆಹನಿಗಳು ಸಣ್ಣ ತೊರೆಯಾಗಿ, ಹಲವು ತೊರೆಗಳು ಸೇರಿ ನದಿಯಾಗಿ, ಕ್ರಮೇಣ ಅನೇಕ ನದಿಗಳು ಒಂದಾಗಿ ಬೃಹತ್ತಾದ ಮಹಾನದಿಯಾಗಿ ಹರಿದು, ಕೊನೆಗೊಮ್ಮೆ ಅಸೀಮ ಸಮುದ್ರವನ್ನು ಸೇರುವಂತೆ ಈ ಮಾತೃಭಾವದ ಆರಾಧನೆ. ಪ್ರಾಚೀನ ಋಷಿಮುನಿಗಳ ವೇದಸಂಹಿತೆಗಳ ನಡುವೆ, **'ಅಹಂ ರುದ್ರೇಭಿರ್ವಸುಭಿಶ್ಚರಾಮಿ...'** (ನಾನು ರುದ್ರ, ವಸುಗಳೊಡನೆ ಸಂಚರಿಸುತ್ತೇನೆ) ಎಂದು ಆರಂಭವಾಗುವ ದೇವೀಸೂಕ್ತದಲ್ಲಿ ಬರುವ ವಾಕ್ ಎಂಬ ಋಷಿಯೊಬ್ಬಳ ಅದ್ವೈತಾನುಭೂತಿಯ ಅಭಿವ್ಯಕ್ತಿಗೂ, ಮುಂದೆ ದರ್ಶನಗಳ ಯುಗದಲ್ಲಿ ಶ್ರೀಶಂಕರರ **'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ'** ('ಕೆಟ್ಟ ಮಗನಾದರೂ ಒಂದುವೇಳೆ ಹುಟ್ಟಬಹುದು; ಆದರೆ ಕೆಟ್ಟ ತಾಯಿಯು ಎಂದಿಗೂ ಹುಟ್ಟುವುದಿಲ್ಲ' –*ದೇವ್ಯಪರಾಧ ಕ್ಷಮಾಪಣಸ್ತೋತ್ರಮ್*)) ಎಂಬ ಭಾವಭರಿತ ಸ್ತೋತ್ರಕ್ಕೂ, ಶಿವನ ಎದೆಯನ್ನು ಮೆಟ್ಟಿನಿಂತ ರುಂಡಮಾಲಾಧಾರಿಣಿ ಕಾಳೀಮಾತೆಯ ಭೀಕರತೆಗೂ ಹಿನ್ನೆಲೆಯಾಗಿ ಇಂತಹ ಭಾವಾಭಿವ್ಯಕ್ತಿಯ ಬೆಳವಣಿಗೆಯಿದೆ. ವಿಭಿನ್ನ ಸ್ತರದ ಮನಸ್ಸುಗಳಿಗೆ ಯಾವುದು ಸಹಜವಾದ ಭಾವನೆಯೆನಿಸುವುದೋ ಅದನ್ನು ಸ್ವೀಕರಿಸಿ, ಸಾಧನೆಯ ಪಥದಲ್ಲಿ ಸಾಗುವ ಅವಕಾಶ ಇಲ್ಲಿದೆ. ದುರ್ಗಾಪೂಜೆ ನಮ್ಮ ನಾಡಿನ ಎಲ್ಲೆಡೆ ವಿವಿಧ ರೀತಿಯಲ್ಲಿ ಆಚರಿಸಲ್ಪಡುತ್ತಿದೆ. ನಮ್ಮ ತಾಯ್ನಾಡು ಜಗನ್ಮಾತೆಯ ನಾಡು ಎಂಬುದನ್ನು ನಾವು ಈ ಮೂಲಕ ಕಂಡುಕೊಳ್ಳಬೇಕಾಗಿದೆ.

## ಮಾತೃಪೂಜೆ



ತಾಯಿಯಲ್ಲಿ ಅಹೇತುಕ ಪ್ರೀತಿಯನ್ನು ನಾವು ನೋಡುತ್ತೇವೆ. ಅವಳ ಪ್ರೀತಿಯಲ್ಲಿ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲ. ಅವಳ ಪ್ರೀತಿ ಎಂದೆಂದಿಗೂ ನಾಶವಾಗುವುದಿಲ್ಲ. ಇಂತಹ ಪ್ರೇಮ ಯಾರಿಗೆ ಸಾಧ್ಯ? ತಾಯಿಗೆ ಮಾತ್ರ ಸಾಧ್ಯ.

"ಎಲ್ಲ ಕಡೆಗಳಲ್ಲಿಯೂ ವ್ಯಕ್ತವಾಗುತ್ತಿರುವ ಶಕ್ತಿಯೇ ನಾನು" ಎನ್ನುವಳು ತಾಯಿ. ಈ ಪ್ರಪಂಚವನ್ನು ಸೃಷ್ಟಿಸುವವಳು ಅವಳೇ, ಈ ಪ್ರಪಂಚವನ್ನು ನಾಶಮಾಡುವವಳೂ ಅವಳೇ. ವಿನಾಶವು ಸೃಷ್ಟಿಗೆ ಆದಿ ಎಂಬುದನ್ನು ಹೇಳಲೇಬೇಕಾಗಿಲ್ಲ. ಬೆಟ್ಟದ ತುದಿ ಎಂದರೆ ಅದು ಕಣಿವೆಯ ಪ್ರಾರಂಭವಾಗಿರುತ್ತದೆ.

ಅಂತೂ ಇದೆಲ್ಲ ತಾಯಿಯ ಲೀಲೆ. ಇದೇನೂ ಅಷ್ಟೊಂದು ಹದಗೆಟ್ಟಿಲ್ಲ. ಸರ್ವಶಕ್ತನನ್ನು ಯಾವುದು ಚಲಿಸುವಂತೆ ಮಾಡಬಲ್ಲುದು? ಈ ಪ್ರಪಂಚವನ್ನು ಸೃಷ್ಟಿಸುವಂತೆ ಯಾರು ತಾಯಿಗೆ ಪ್ರೇರೇಪಿಸಿದ್ದು? ಅವಳಿಗೆ ಗುರಿ ಏನೂ ಇಲ್ಲ. ಯಾವುದನ್ನು ಇನ್ನೂ ಮುಟ್ಟಿಲ್ಲವೋ, ಅದೇ ಗುರಿ. ಈ ಸೃಷ್ಟಿ ಏತಕ್ಕೆ? ತಮಾಷೆಗೆ. ಇದನ್ನು ಮರೆತುಬಿಟ್ಟು ನಾವು ಜಗಳ ಕಾಯುತ್ತೇವೆ, ದುಃಖಪಡುತ್ತೇವೆ. ನಾವು ಜಗನ್ಮಾತೆಯೊಡನೆ ಆಡುತ್ತಿರುವೆವು.

ಶರಣಾಗತಿಯ ಭಾವ ಕೊನೆಗೆ ಬರುವುದು. ಆಗ ನಾವು ಜಗನ್ಮಾತೆ ಹೇಳಿದಂತೆ ಕೇಳುವೆವು. ದುಃಖ ಬಂದರೆ ಸ್ವಾಗತ, ಸುಖ ಬಂದರೆ ಅದಕ್ಕೂ ಸ್ವಾಗತ. ಕೊನೆಗೆ ನಾವು ಸದಾ ಪ್ರೀತಿಯ ಮೆಟ್ಟಿಲನ್ನು ಹತ್ತಿದರೆ ಹೃದಯದ ವಕ್ರತೆಯೆಲ್ಲ ನೇರವಾಗುವುದು. ಆಗ ಬ್ರಾಹ್ಮಣ, ಪರಯ, ನಾಯಿ ಎಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡುತ್ತೇವೆ. ಸಮದೃಷ್ಟಿಯಿಂದ ಪಕ್ಷಪಾತವಿಲ್ಲದೆ ಎಂದಿಗೂ ಬತ್ತದ ಪ್ರೇಮದಿಂದ ಪ್ರಪಂಚವನ್ನು ನೋಡುವವರೆಗೆ ಪುನಃ ಪುನಃ ನಾವು ಸೋಲಬೇಕಾಗುವುದು. ಕೊನೆಗೆ ವೈವಿಧ್ಯವೆಲ್ಲ ಇಲ್ಲವಾಗಿ ಎಲ್ಲರಲ್ಲಿಯೂ ನೆಲೆಸಿರುವ ಸನಾತನಿಯಾದ ಜಗನ್ಮಾತೆಯನ್ನು ನೋಡುವೆವು.

**–ಸ್ವಾಮಿ ವಿವೇಕಾನಂದ**

*(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೭, ಪು.೩೨೩–೨೪)*

# ನೆನಪಿನಂಗಳದಲ್ಲಿ ಮೂವರು ಶ್ರೇಷ್ಠ ಸಂನ್ಯಾಸಿಗಳು

ಭಾಗ–೨

**ಸ್ವಾಮಿ ಶ್ರೀಧರಾನಂದ**

ಅನು: ಸ್ವಾಮಿ ಜ್ಞಾನಯೋಗಾನಂದ



## ಸ್ವಾಮಿ ಶಾಂತಾನಂದರು

೧೯೪೭ನೇ ಇಸವಿಯಲ್ಲಿ ನಾನು ಬೇಲೂರು ಮಠಕ್ಕೆ ಹೋದಾಗ ಶ್ರೀಮಾತೆಯವರಿಂದ ಮಂತ್ರದೀಕ್ಷೆ ಪಡೆದಿದ್ದ ಅವರ ಶಿಷ್ಯ ಸ್ವಾಮಿ ಶಾಂತಾನಂದಜಿ ಅಲ್ಲಿದ್ದರು. ಇತ್ತೀಚೆಗೆ ಕಾಶಿಯಲ್ಲಿ ಬೇಸಿಗೆಯ ಧಗೆ ಸಹಿಸಲು ಅಸಾಧ್ಯವೆನಿಸಿ, ಬೇಸಿಗೆಯ ಕೆಲವು ತಿಂಗಳುಗಳನ್ನು ಬೇಲೂರು ಮಠದಲ್ಲಿ ಕಳೆಯಲು ಅವರು ಅಲ್ಲಿಗೆ ಹೋಗುತ್ತಿದ್ದರು. ಆ ವರ್ಷ ಅವರು ಕಲ್ಕತ್ತೆಯಲ್ಲಿದ್ದರು; ಆದರೆ ಮುಂದಿನ ವರ್ಷ ಸ್ವಾಮಿ ಪವಿತ್ರಾನಂದರು (ಭೂಪೇನ್ ಮಹಾರಾಜ್) ಬೇಸಿಗೆಯಲ್ಲಿ ಮಾಯಾವತಿಗೆ ಅವರನ್ನು ಆಹ್ವಾನಿಸಿ, ಅಲ್ಲಿಗೆ ಕರೆದುಕೊಂಡು ಹೋಗಿದ್ದರು. ಅವರಿಗೆ ನನ್ನ ಪರಿಚಯ ಮಾಡಿಸಿದವರು ರಾಮಕೃಷ್ಣ ಮಹಾಸಂಘದ ಈಗಿನ ಅಧ್ಯಕ್ಷರಾದ ಸ್ವಾಮಿ ಆತ್ಮಸ್ಥಾನಂದಜಿ ಮಹಾರಾಜರು. ಶಾಂತಾನಂದಜಿಯವರದು ಸಣ್ಣ ದೇಹ, ಮುಖದಲ್ಲಿ ಅಸಾಧಾರಣ ಪ್ರಭೆ, ಅತ್ಯಂತ ಗೌರವರ್ಣ ಹಾಗೂ ಅತ್ಯಂತ ತೆಳುವಾದ ಚರ್ಮ– ಎಷ್ಟರ ಮಟ್ಟಿಗೆ ಎಂದರೆ ತಳಭಾಗದ ನರನಾಡಿಗಳೆಲ್ಲ ಎದ್ದು ಕಾಣಿಸುತ್ತಿದ್ದವು. ಯಾವುದೇ ಕಾರಣಕ್ಕಾಗಲಿ ಅವರು ಆವೇಗಕ್ಕೆ ಒಳಗಾದರೆ ಅವರ ಮುಖ ಕೆಂಪಾಗಿಬಿಡುತ್ತಿತ್ತು. ಅದನ್ನು ನೋಡಿದರೆ ಚರ್ಮವನ್ನು ಭೇದಿಸಿ ರಕ್ತ ಹೊರಕ್ಕೆ ಚಿಮ್ಮಿಬಿಡುವುದೋ ಅನ್ನಿಸುತ್ತಿತ್ತು. ಕಾರಣವೇನೇ ಇರಲಿ, ನಾನು ಅವರ ಬಳಿಗೆ ಸೇವಕನಾಗಿ ಹೋದೆ. ತುಂಬ ವೃದ್ಧ ಸಾಧುಗಳು; ಶ್ರೀಮಾತೆಯವರಂತೆಯೇ ವಾತ್ಸಲ್ಯಪೂರ್ಣರು. ಒಂದು ದಿನ ಅವರನ್ನು ಕೇಳಿದೆ, "ನೀವು ಎಂದಾದರೂ ಶ್ರೀಮಾತೆಯವರನ್ನು ಸಮಾಧಿಯ ಅವಸ್ಥೆಯಲ್ಲಿ ನೋಡಿದ್ದೀರಾ?" ಶ್ರೀರಾಮಕೃಷ್ಣರಿಗೆ ಆಗಾಗ ಸಮಾಧಿ ಉಂಟಾಗುತ್ತಿತ್ತು, ಭಾವದಿಂದ ಉನ್ಮತ್ತರಾಗಿಬಿಡುತ್ತಿದ್ದರು. ಆದರೆ ಶ್ರೀಮಾತೆಯವರಿಗೆ ಅಂಥದೇನೂ ಆಗುತ್ತಿರಲಿಲ್ಲ. ಇದೆಂಥ ವಿಚಿತ್ರ – ಈ ಕಾರಣದಿಂದಲೇ ಹಾಗೆ ಪ್ರಶ್ನಿಸಿದ್ದೆ. ನಾನು ಆ ಪ್ರಶ್ನೆಯನ್ನು ಕೇಳಿದಾಗ ಮಹಾರಾಜ್ ಯಾವ ರೀತಿ ಇದ್ದರೆಂದರೆ, ನನ್ನ ಮಾತು ಅವರ ಕಿವಿಗೆ ಬೀಳಲೇ ಇಲ್ಲವೋ ಎಂಬಂತೆ. ಅದಕ್ಕಾಗಿ ನಾನು ಮತ್ತೊಮ್ಮೆ ದನಿಯೆತ್ತಿ ಅದೇ ಪ್ರಶ್ನೆಯನ್ನು ಕೇಳಿದೆ. ಅದರಿಂದ ಏನೂ ಪರಿಣಾಮವುಂಟಾಗದೆ ಹೋದಾಗ, ನಾನು ಮೂರನೇ ಬಾರಿ ತುಸು ಅಸಮಾಧಾನದ ಧ್ವನಿಯಲ್ಲಿ ಹೇಳಿದೆ, "ನಾನು ನಿಮ್ಮಲ್ಲಿ ಒಂದು ಪ್ರಶ್ನೆ ಕೇಳುತ್ತಿದ್ದೇನೆ. ಆದರೆ ನೀವು ಅದಕ್ಕೆ ಉತ್ತರ ಕೊಡುತ್ತಿಲ್ಲ. ಅಥವಾ ಉತ್ತರ ಕೊಡಬೇಕೆಂದು ಮನಸ್ಸಿದ್ದರೂ, ನಿಮಗದು ಸಾಧ್ಯವಾಗುತ್ತಿಲ್ಲ." ಅವರು ನನ್ನತ್ತ ನೋಡಿದರು, ಅವರ ಮುಖ ಆವೇಗದಿಂದ ಕೆಂಪಾಗುತ್ತಿದ್ದುದನ್ನು ನಾನು ಗಮನಿಸಿದೆ. ಅವರು ಹೇಳತೊಡಗಿದರು: "ನೀನು ಓದು–ಬರಹ ಕಲಿತ ಹುಡುಗನಲ್ಲವೆ! ಓದು ಬರಹ ಕಲಿತ ಹುಡುಗರಿಗೆ ಇಷ್ಟೊಂದು ಹೀನಬುದ್ಧಿ, ಇಷ್ಟೊಂದು ನೀಚ ಮನಸ್ಸು ಇರುತ್ತದೆ ಅಂತ ನನಗೆ ಗೊತ್ತಿರಲಿಲ್ಲ." ನಾನು ಸುಮ್ಮನಿದ್ದೆ. ಮನಸ್ಸಿನಲ್ಲೇ ಚಿಂತಿಸಿದೆ, ನಾನು ಯಾವಾಗ ನನ್ನ ನೀಚಮನಸ್ಸನ್ನು ಅವರ ಮುಂದೆ ಪ್ರಕಟಿಸಿದೆ? ಅವರು ದನಿಯೆತ್ತಿ ಮಾತು ಮುಂದುವರಿಸಿದರು: "ನನ್ನ ಮಾತೆಯನ್ನು ನೀನು ಏನೆಂದುಕೊಂಡಿದ್ದೀಯಾ ಹೇಳು? ಅವರಿಗೆ ಎಲ್ಲರ ಮುಂದೆ ಸಮಾಧಿಯುಂಟಾಗಲು ಅವರೇನು ಸಾಮಾನ್ಯ ಸಾಧಕಿಯೆ? ಅಯ್ಯೋ ಮೂರ್ಖ! ನಿನಗೆ ಸ್ವಲ್ಪವೂ

ಬುದ್ಧಿಯಿಲ್ಲವಲ್ಲಾ – ಅವರೇ ಸಾಕ್ಷಾತ್ ಮಹಾಮಾಯೆ, ಅವರೇ ಪರಮೇಶ್ವರಿ, ಅವರೇ ಜಗದಂಬೆ! ತಿಳಿಯಿತೆ? ಅವರು ಕೃಪೆ ತೋರಿದರೆ ಮಾತ್ರ ಸಾಧಕ–ಸಾಧಕಿಯರಿಗೆ ಸಮಾಧಿಯುಂಟಾಗುವುದು; ಅವರು ಸಮಾಧಿ **ನೀಡು**ತ್ತಾರೆ!" ಅವರು ಆವೇಗದಿಂದ ಮತ್ತೆ ಹೇಳತೊಡಗಿದರು, "ಶ್ರೀರಾಮಕೃಷ್ಣರಿಗೆ ಆಗಾಗ ಸಮಾಧಿ, ಭಾವೋನ್ಮತ್ತತೆ ಉಂಟಾಗುತ್ತಿದ್ದುದನ್ನು ನೋಡಿ ನನಗೆ ಈ ಪ್ರಶ್ನೆ ಕೇಳಿದೆ; ತಿಳಿದುಕೋ– ಮಹಾಮಾಯೆ, ಪರಮೇಶ್ವರಿ, ಜಗನ್ಮಾತೆ ಕೃಪೆ ಮಾಡಿದ್ದರಿಂದಲೇ ಅವರಿಗೆ ಹೀಗೆ ಶುದ್ಧ ಸಾತ್ವಿಕ ಪರಿವರ್ತನೆ ಉಂಟಾಯಿತು. ನಿನಗೆ ಈಗ ನನ್ನ ಮಾತು ಅರ್ಥವಾಗದು. ಶಾಸ್ತ್ರಗಳನ್ನು ಓದುವಾಗ, ಶಾಸ್ತ್ರಜ್ಞಾನ ಉಂಟಾದಾಗ ನಿನಗೆ ತಿಳಿದೀತು, ಇವೆಲ್ಲವೂ ಮಹಾಮಾಯೆಯ ಪರಿಧಿಯೊಳಗೆ ಇವೆ ಅಂತ." ನಾನು ಮಹಾರಾಜರನ್ನು ಸಮಾಧಾನಪಡಿಸಲು ಹರಸಾಹಸ ಮಾಡುತ್ತಿದ್ದೆ. ಕೊನೆಗೂ ಅವರು ಶಾಂತರಾದರು. ಒಂದು ಮಾತಿದೆ, ಸಂನ್ಯಾಸಿಯ ಕೋಪ ನೀರಿನಲ್ಲಿ ಎಳೆದ ಗೆರೆಯಂತೆ ಅಂತ. (ಅಂದರೆ ಕೇವಲ ಒಂದು ಕ್ಷಣ ಮಾತ್ರ ಇರುತ್ತದೆ.) ಸ್ವಲ್ಪ ಹೊತ್ತಿನ ನಂತರ ಅವರು ನನಗೆ ಹೇಳಿದರು, "ನಾನೇನು ಹೇಳಿದೆ, ಅದು ಅರ್ಥವಾಯಿತೆ? ನನ್ನ ಮಾತನ್ನು ನೀನು ಮನಸ್ಸಿನಲ್ಲಿಟ್ಟುಕೊಂಡಿದ್ದೀಯಾ? ಆ ಮಾತನ್ನು ಯಾವಾಗಲೂ ನೆನಪಿನಲ್ಲಿಟ್ಟುಕೋ. ಅವರು ಯಾರು? ಅವರು ಸಾಕ್ಷಾತ್ ಮಹಾಮಾಯೆ, ಪರಮೇಶ್ವರಿ, ಜಗನ್ಮಾತೆ, ಜಗದಂಬೆಯಾಗಿದ್ದರು." ಆಧ್ಯಾತ್ಮಿಕ ಜೀವನದಲ್ಲಿ ಕಣ್ಣು ತೆರೆಯುವುದು ಅಥವಾ ದೃಷ್ಟಿಕೋನ ಬದಲಾಗುವುದು ನನ್ನ ಪಾಲಿಗೆ ಇದೇ ಮೊದಲ ಬಾರಿ.

ಹೀಗೆ ಕೆಲವುದಿನ ಕಳೆದುಹೋಯಿತು. ನನ್ನ ಮನಸ್ಸಿನಲ್ಲಿ ಒಂದು ಪ್ರಶ್ನೆ ಮೂಡಿತು – ಅವರು ಶ್ರೀಮಾತೆಯವರ ಶಿಷ್ಯರು; ಶ್ರೀಮಾತೆಯವರ ಸೇವೆ ಮಾಡಿದ್ದರು. ಅನುಪಮ ಗುರುಭಕ್ತಿಯಿಂದ ಅವರು ಈ ಮಾತನ್ನೆಲ್ಲ ಹೇಳಿದರೆ? ಅಥವಾ, ಶ್ರೀಮಾತೆಯವರಿಂದ ಏನನ್ನು ಕೇಳಿ ತಿಳಿದರೋ ಅದನ್ನೇ ನನಗೆ ತಿಳಿಯಹೇಳುವ ಸಲುವಾಗಿ ಹೇಳಿದರೆ? ಒಂದು ದಿನ ನಾನು ಇದ್ದಕ್ಕಿದ್ದಂತೆ ಅವರಿಗೆ ಕೇಳಿದೆ. "ಮಹಾರಾಜ್, ಅಂದು ನೀವು ಶ್ರೀಮಾತೆಯವರನ್ನು ಕುರಿತು ಹೇಳಿದ ಮಾತುಗಳು ನನ್ನ ಮನಸ್ಸಿನಲ್ಲಿ ದೃಢವಾಗಿ ನಿಂತುಬಿಟ್ಟಿವೆ. ಅದನ್ನು ನಾನು ಎಂದೂ ಮರೆಯಲಾರೆ. ಆದರೆ ಮಹಾರಾಜ್, ಶ್ರೀಮಾತೆ ಅದನ್ನೆಲ್ಲ ತಮ್ಮ ಬಾಯಿಯಿಂದಲೇ ಹೇಳಿದರು ಅಂತ ನೀವು ಹೇಳುತ್ತೀರಾ?" ಅದಕ್ಕೆ ಮಹಾರಾಜ್, "ಹೌದು, ನಾನು ಈ ಕಿವಿಯಿಂದಲೇ ಅದನ್ನು ಕೇಳಿದ್ದೇನೆ. ಒಬ್ಬ ಭಕ್ತ ಶ್ರೀರಾಮಕೃಷ್ಣರ ಜೀವನಚರಿತ್ರೆಯನ್ನು ಓದಿ, ಅವರು ಸಾಕ್ಷಾತ್ ಭಗವಂತನೇ ಆಗಿದ್ದಾರೆ, ಅವರು ಶ್ರೀಮನ್ನಾರಾಯಣನೇ ಆಗಿದ್ದಾರೆ ಎಂದು ಭಾವಿಸತೊಡಗಿದ. ಎಂಥ ಭಾವನೆ! ಹಿಂದೆ ನಾರಾಯಣ ಅಥವಾ ವಿಷ್ಣು ಎಂದರೆ ಹೇಗೆ ಭಾವಿಸುತ್ತಿದ್ದರೋ ಅಂಥದೇ ಭಾವನೆ. ಒಂದುವೇಳೆ ಅದು ನಿಜವೇ ಆಗಿದ್ದರೆ, ಶ್ರೀಮಾತೆ ಏನಾಗುವರು? ಸಾಕ್ಷಾತ್ ನಾರಾಯಣಿ, ಭಗವತಿಯೇ ಆಗುವರು. ಆ ಭಕ್ತ ಭಾವಿಸಿದ, ಶ್ರೀಮಾತೆ ನಿಜವಾಗಿಯೂ ದೇವೀರೂಪದಲ್ಲಿ ಬಂದು ಸ್ವರ್ಣಸಿಂಹಾಸನದಲ್ಲಿ ಕುಳಿತುಕೊಳ್ಳುವರು; ಅಷ್ಟ ಸಖಿಯರು ಬಂದು ಅವರಿಗೆ ಗಾಳಿಬೀಸುವರು ಎಂದು. ಆ ಭಕ್ತನ ಅಂತರಂಗವೆಲ್ಲ ಈ ಭಾವನೆಯಿಂದ ತುಂಬಿಕೊಂಡಿತು. ಹೀಗೆ ಶ್ರೀಮಾತೆಯವರ ದರ್ಶನ ಪಡೆಯಲು ಅವನಿಗೆ ಅತ್ಯಂತ ವ್ಯಾಕುಲತೆಯುಂಟಾಯಿತು. ಅವನು ಅಸ್ಸಾಮಿನ ಯಾವುದೋ ಒಂದು ಹಳ್ಳಿಯಿಂದ ಶ್ರೀಮಾತೆಯವರನ್ನು ನೋಡಲು ಜಯರಾಮಬಾಟಿಗೆ ಬಂದಿದ್ದ. ಆಗ ನಾನು ಅಲ್ಲೇ ಮನೆಯೊಳಗೆ ಇದ್ದೆ. ಬಾಗಿಲಲ್ಲಿ ನಿಂತು ಅವನು ಕೇಳಿದ, 'ಇದು ಶ್ರೀಮಾತೆಯವರ ಮನೆಯೇನು?' ಮುಂಭಾಗದಲ್ಲಿ ಅವನು ನೋಡಿದ, ಒಬ್ಬಾಕೆ ನಡುವಯಸ್ಸಿನ ಮಹಿಳೆ ಅರ್ಧ ಮಾಸಿದ ಬಟ್ಟೆಯನ್ನು ಧರಿಸಿ, ವಾತದ ತೊಂದರೆಯಿಂದ ಬಾಗಲಾರದೆ ಕಷ್ಟಪಡುತ್ತ ಗುಡಿಸುತ್ತಿದ್ದರು. ಅವರು ದಾಸಿಯಿರಬೇಕು ಎಂದು ಆತ ಭಾವಿಸಿದ. ಭಕ್ತನ ಪ್ರಶ್ನೆಯನ್ನು ಕೇಳಿದ ಆಕೆ ಕಸಬರಿಕೆಯನ್ನು ಮೂಲೆಯಲ್ಲಿಟ್ಟು, ಕೈ ಒರೆಸುತ್ತ "ಹೌದು ಮಗೂ, ಇದೇ ನಿನ್ನ ಶ್ರೀಮಾತೆಯವರ ಮನೆ" ಎಂದರು. ಭಕ್ತನ ಕನಸೆಲ್ಲ ಒಡೆದುಹೋಯಿತು! ಅವನು ಮನಸ್ಸಿನಲ್ಲಿ ಎಂಥೆಂಥ ರೂಪವನ್ನೆಲ್ಲ ಕಲ್ಪಿಸಿಕೊಂಡಿದ್ದನೋ, ಅವುಗಳೊಂದಿಗೆ ಈ ದೃಶ್ಯ ಸ್ವಲ್ಪವೂ ಹೊಂದಾಣಿಕೆಯಾಗುತ್ತಿಲ್ಲ. ಅವನು ಹೇಳತೊಡಗಿದ: 'ಅಬ್ಬಾ! ಇದೇ ಘೋರವಾದ ಮಾಯೆಯೆಂದರೆ!' ಅದನ್ನು ಕೇಳಿದ ಶ್ರೀಮಾತೆ, 'ಹೌದು ಮಗೂ, ನಾನೇ ಮಹಾಮಾಯೆ' ಎಂದರು. ಅವನನ್ನು 'ಬಾ ಮಗೂ' ಎಂದು ಒಳಕ್ಕೆ ಕರೆದುಕೊಂಡು ಹೋದರು. ಅವನ ಕಲ್ಪನೆಗಳೆಲ್ಲ ಭಂಗವಾದಾಗ ಶ್ರೀಮಾತೆ ಅವನನ್ನು ತುಂಬ ಆದರ, ಉಪಚಾರಗಳಿಂದ ಅವನಿಗುಂಟಾದ ಯಾತನೆಯನ್ನು ದೂರಮಾಡಲು ಯತ್ನಿಸುತ್ತಿದ್ದರು. ಅದೇನೇ ಇರಲಿ, ಅವನಿಗೆ ಬೇರೇನೂ ಹೇಳಲಾಗಲಿಲ್ಲ. ಶ್ರೀಮಾತೆ ಸ್ವತಃ ತಮ್ಮ ಬಾಯಿಯಿಂದಲೇ, 'ಹೌದು ಮಗೂ, ನಾನೇ ಮಹಾಮಾಯೆ' ಎಂದಿದ್ದರು ತಾನೆ!" ಸ್ವಾಮಿ ಶಾಂತಾನಂದ ಮಹಾರಾಜರ ಬಾಯಿಯಿಂದಲೇ ಈ ಘಟನೆಯನ್ನು ಕೇಳಿದ ನಂತರ ನಾನೆಂದಿಗೂ ಅವರ ಬಳಿ ಶ್ರೀಮಾತೆಯವರನ್ನು ಕುರಿತು ಪ್ರಶ್ನಿಸಲಿಲ್ಲ. ಅದರ ಅಗತ್ಯವೂ ಕಂಡುಬರಲಿಲ್ಲ.

ಕ್ರಮೇಣ ಶಾಂತಾನಂದಜಿ ಕಾಯಿಲೆ ಹಿಡಿದು ಮಲಗಿದರು. ಅವರ ಸೇವೆ ಮಾಡುವ ಸೌಭಾಗ್ಯ ನನ್ನ ಪಾಲಿಗೆ ಒದಗಿ ಬಂದಿತ್ತು. ಅವರ ದಿನಚರಿ ಹೀಗಿತ್ತು: ಬೆಳಗ್ಗೆ ಮೂರುವರೆ ಗಂಟೆಗೇ ನಿದ್ದೆ ಬಿಟ್ಟೆದ್ದು ಅವರು ಮುಖ ತೊಳೆಯುತ್ತಿದ್ದರು. ಅನಂತರ ತಮ್ಮ ಸರ್ವಾಂಗಕ್ಕೆ ಗಂಗಾಜಲ ಸಿಂಪಡಿಸಿ, ಜಪಮಾಲೆಯನ್ನು ತೆಗೆದುಕೊಂಡು ಜಪಮಾಡಲು ಕುಳಿತುಕೊಳ್ಳುತ್ತಿದ್ದರು. ಜಪ ಮುಗಿದ ನಂತರ ಒಂದು ಲೋಟ ಬಿಸಿಯಾದ ಹಾರ್ಲಿಕ್ಸ್ ಕುಡಿಯುತ್ತಿದ್ದರು. ಅನಂತರವೇ

ಅವರ ದೈನಂದಿನ ಚಟುವಟಿಕೆ ಆರಂಭವಾಗುತ್ತಿತ್ತು. ಅವರು ನನಗೆ ಒಂದೊಂದು ಬಾರಿ ಹೇಳುತ್ತಿದ್ದರು. "ನಾನು ಗಮನಿಸುತ್ತಿದ್ದೇನೆ, ನೀನು ನನ್ನ ಸೇವೆ ಮಾಡುತ್ತ ಮಾಡುತ್ತ ನಿನಗೆ ಗುರು ಕೊಟ್ಟ ಆದೇಶಗಳನ್ನು ಪಾಲಿಸುತ್ತಿಲ್ಲ. ನಿನಗೆ ನಾನೊಂದು ಉಪಾಯ ಹೇಳಿಕೊಡುತ್ತೇನೆ. ಹಾಗೆ ಮಾಡಿದರೆ ನಿನ್ನ ಗುರುಗಳ ಆದೇಶವನ್ನು ಪಾಲಿಸಿದಂತಾಗುತ್ತದೆ." ಅಂದರೆ, ಭಗವಂತನ ಸ್ಮರಣೆ, ಮನನ, ಭಗವಂತನನ್ನು ಹೃದಯದಲ್ಲಿ ಪ್ರತಿಷ್ಠಾಪಿಸುವುದು ಮೊದಲಾಗಿ ನನ್ನ ಗುರು ಉಪದೇಶಿಸಿದ ಕಾರ್ಯಗಳನ್ನು ಮಾಡುವುದು ಹೇಗೆ ಎಂದು. ಅವರು ಹೇಳಿಕೊಟ್ಟ ಉಪಾಯ ಹೀಗಿತ್ತು: ಒಂದು ದಿನ ಅವರು ನನಗೆ ಹೇಳಿದರು, "ನೋಡು ಸಲಿಲ್, ನೀನು ಶ್ವಾಸ-ನಿಃಶ್ವಾಸದೊಂದಿಗೆ ಇಷ್ಟಮಂತ್ರದ ಜಪ ಮಾಡಲು ಪ್ರಯತ್ನ ಮಾಡು, ನೋಡೋಣ." ಕೇಳುವಾಗಲೇನೋ ಅದು ಅತ್ಯಂತ ಸರಳವಾಗಿ ಕಂಡಿತು. ಆದರೆ ಪದೇಪದೇ ಹಾಗೆ ಮಾಡಲು ಮರೆತುಹೋಗುತ್ತಿತ್ತು. ನಾನು ಈಗತಾನೇ ಈ ಆಧ್ಯಾತ್ಮಿಕ ಮಾರ್ಗದಲ್ಲಿ ಹೆಜ್ಜೆಯಿಟ್ಟಿದ್ದೇನೆ. ನನ್ನ ಮನಸ್ಸು ಇನ್ನೂ ಚಂಚಲವಾಗಿದೆ. ಅವರು ಒಂದು ಸಲ ಹೇಳಿದ ಮಾತ್ರಕ್ಕೆ ಅದು ಸುಮ್ಮನಾಗಲಿಲ್ಲ; ಅವರು ಆಗಾಗ ಕೇಳುತ್ತಿದ್ದರು, "ಸಲಿಲ್, ಏನು ಮಾಡುತ್ತಿದ್ದೀಯಾ?" ನಾನು ಲಜ್ಜಿತನಾಗಿ ಹೇಳುತ್ತಿದ್ದೆ, "ಇಲ್ಲ ಮಹಾರಾಜ್, ಮರೆತುಬಿಟ್ಟೆ." ಅದಕ್ಕೆ ಅವರು, "ಮೊದಮೊದಲು ಮರೆತುಹೋಗುವುದು. ಜಪಮಾಡುತ್ತ ಹೋಗು, ಶ್ವಾಸ-ನಿಃಶ್ವಾಸದೊಂದಿಗೆ ಜಪಮಾಡುತ್ತ ಹೋಗು" ಎನ್ನುತ್ತಿದ್ದರು. ನಾನು ಹೀಗೆ ಅನೇಕಬಾರಿ ತಲೆಕೆರೆದುಕೊಳ್ಳುತ್ತ, 'ಮರೆತುಹೋಯಿತು' ಎಂದಿದ್ದೆ. ಸುಳ್ಳನ್ನಂತೂ ಹೇಳುವ ಹಾಗಿಲ್ಲ. ಒಂದು ದಿನ ಅವರು ಜೋರಾಗಿ ಬಯ್ಯಲು ಆರಂಭಿಸಿಬಿಟ್ಟರು: "ಈರೀತಿ ಇಷ್ಟದೇವತೆಯ ನಾಮಸ್ಮರಣೆಮಾಡಲು ಮರೆತು ಹೋಗುವು ದೆಂದರೆ, ನಿನಗೆ ಅದೆಂಥ ಸಾಧು ಆಗುವ ಪ್ರವೃತ್ತಿಯಿದೆ? ನಿನಗೆ ನಾಚಿಕೆಯಾಗುವುದಿಲ್ಲವೆ? ಹೀಗೆ ಎಷ್ಟು ದಿನ ಕಳೆಯುವೆ? ತಲೆ ಕೆರೆದುಕೊಳ್ಳುತ್ತ 'ಮರೆತುಹೋಯಿತು' ಅನ್ನುತ್ತೀಯಾ, ಇನ್ನು ಮೇಲೆ ನೀನು ಈ ಮಾತನ್ನು ನನ್ನ ಮುಂದೆ ಹೇಳಬೇಡ. ತುಸು serious ಆಗಿ ಪ್ರಯತ್ನ ಮಾಡು" ಎಂದರು. ನಾನೆಂದೆ, "ಸರಿ, ಮಹಾರಾಜ್." ಅವರು ಹಾಗೆ ಹೇಳಿಬಿಟ್ಟರು; ಅನಂತರ ಏನಾಯಿತೆಂದರೆ, ಅವರು ನನ್ನನ್ನು 'ಸಲಿಲ್' ಎಂದು ಕರೆದಾಗಲೆಲ್ಲ ನನ್ನೆದೆ ಹೊಡೆದುಕೊಳ್ಳಲು ಆರಂಭಿಸುತ್ತಿತ್ತು. ಎಲ್ಲಾದರೂ 'ಸಲಿಲ್, ಜಪಮಾಡುತ್ತಿದ್ದೀಯಾ?' ಎಂದು ಕೇಳಿಬಿಟ್ಟರೆ ಅಂತ.

ಮಹಾರಾಜ್ ಆಗ ಕಾಶಿಯಲ್ಲಿದ್ದರು. ಎರಡು ಅಡಿ ಚದರಳತೆಯ ಒಂದು ಸಣ್ಣ ಕೋಣೆಯಲ್ಲಿ ಅವರು ವಾಸವಾಗಿದ್ದರು. ಅವರ ಮಂಚ ಆ ಕೋಣೆಯ ಒಂದು ಬದಿಯಲ್ಲಿತ್ತು; ನಾನು ನೆಲದಲ್ಲಿ ಕಂಬಳಿ ಹಾಸಿ, ತಲೆದಿಂಬು ಹಾಕಿ ಮಲಗುತ್ತಿದ್ದೆ. ಆಗಾಗ ನಾನು ಹೊರಗೆ ಹೋಗ ಬೇಕಾಗುತ್ತಿತ್ತು. ಹೊರಗಿನಿಂದ ಬಂದು, ಕೋಣೆಯ ಹೊಸ್ತಿಲಲ್ಲಿ ಕಾಲಿಡುತ್ತಿರುವಾಗಲೇ ನನಗೆ ನೆನಪಾಗುತ್ತಿತ್ತು, 'ಸಲಿಲ್, ಜಪ ಮಾಡುತ್ತಿದ್ದೀಯಾ?' ಎಂದು ಅವರು ಕೇಳಿಯೇ ಬಿಡುತ್ತಾರೆ ಅಂತ. ಅದು ನೆನಪಾಗುತ್ತಲೇ ನಾನು ಅವರು ಹೇಳಿಕೊಟ್ಟಂತೆ ಜಪ ಮಾಡಲು ಪ್ರಯತ್ನಿಸುತ್ತಿದ್ದೆ. ಹೀಗೆ ದಿನ ಕಳೆಯುತ್ತ, ಒಂದು ದಿನ ಅವರು ಇದ್ದಕ್ಕಿದ್ದಂತೆ 'ಸಲಿಲ್' ಎಂದು ಕರೆದ ಕೂಡಲೇ ನಾನು, 'ಸರಿ, ಮಹಾರಾಜ್' ಎಂದುಬಿಟ್ಟೆ. ಆಯಿತಲ್ಲ, ಇನ್ನು ಯಾವುದೇ ಬೈಗುಳ ತಿನ್ನಬೇಕಾಗಿಲ್ಲ ಎಂದುಕೊಂಡೆ. ಅವರು ಹಠಾತ್ತನೆ ಎದ್ದುಕುಳಿತು, "ಏನು, ಹೇಳು?" ಎಂದರು. ಕ್ರಮೇಣ ಅವರು ಸ್ಫೂರ್ತಿಭರಿತರಾದರು. ಮಂಚದಿಂದ ಎದ್ದು ನಿಂತು, "ನೀನು ಈಗ ಹೇಗೆ ಆರಂಭಿಸಿದ್ದೀಯಾ, ಅದನ್ನು ಮಾತ್ರ ನಿಲ್ಲಿಸಬೇಡ. ಆಗಿದೆ, ಅಭ್ಯಾಸವಾಗಿಬಿಟ್ಟಿದೆ. ಇಪ್ಪತ್ತನಾಲ್ಕು ಗಂಟೆ ಹೀಗೆ ಕೋಣೆಯಲ್ಲಿ ಕುಳಿತು ಜಪ ಮಾಡುತ್ತ ನಿನಗೇ ತಿಳಿಯುವುದು- **ಅಜಪಾ ಜಪ**ವುಂಟಾಗುವುದು. ಅದೇ ರೀತಿ ಅನಾಹತ ಧ್ವನಿ ನಿನಗೆ ಕೇಳಿಸುವುದು. ಶಾಸ್ತ್ರ ಓದಿದರೆ ನಿನಗೆ ಇದು ಏನೆಂದು ತಿಳಿಯುವುದು." ಅವರ ಆನಂದವನ್ನು ನೋಡಿದ ನಾನು ನನ್ನ ವಿಷಯವನ್ನು ಮರೆತೇಬಿಟ್ಟೆ. ನಾನಂತೂ ಅವರ ಸೇವೆ ಮಾಡುತ್ತಿದ್ದೇನೆ, ಅವರು ಹೀಗೆ ಆನಂದಪಟ್ಟರೆ ನನಗೂ ಒಳ್ಳೆಯದಾಗುವುದು ಎಂದು ನಾನು ಭಾವಿಸಿದೆ. ಅವರ ಆನಂದದ ಪ್ರವಾಹವನ್ನು ನನ್ನ ಮನಸ್ಸಿನಲ್ಲಿ ಹಿಡಿದಿಟ್ಟುಕೊಂಡರೂ ಸಾಕು, ನನಗೆ ಹಾಗೆ ಜಪಮಾಡಲು ಪ್ರೇರಣೆ ಲಭಿಸುವುದು. ಈ ಕೆಲಸದಲ್ಲಿ ಅವರಿಗಿರುವ ಆನಂದವನ್ನು ನೋಡಿ, ನನ್ನ motivation ಇನ್ನಷ್ಟು ದೃಢವೂ ಆಳವೂ ಆಗಿಬಿಟ್ಟಿತು.

ಇನ್ನೊಂದು ಘಟನೆ ನನಗೆ ನೆನಪಾಗುತ್ತಿದೆ. ಅತ್ಯಂತ ಮಧುರವಾದ ನೆನಪು ಅದು. ಆಗ ಸ್ವಾಮಿ ಶಾಂತಾನಂದಜಿ ಕಾಶಿಯಲ್ಲಿದ್ದರು. ಅವರಿಗೆ ಕ್ಷಯರೋಗ ಉಂಟಾಗಿತ್ತು. ಆಗ ಅದಕ್ಕೆ ಯಾವುದೇ ಔಷಧಿಯಿರಲಿಲ್ಲ. ರೋಗಿಗೆ ಸ್ವಲ್ಪ ಕ್ಯಾಲ್ಸಿಯಂ ಹಾಗೂ ಪುಷ್ಟಿಕರವಾದ ಆಹಾರ ಪದಾರ್ಥಗಳನ್ನು ಕೊಡಬೇಕಿತ್ತು. ಅವರು ಅತ್ಯಂತ ಸಣ್ಣ ದೇಹದ ವ್ಯಕ್ತಿ; ಆದರೆ ಅವರಿಗೆ ಹೊಟ್ಟೆಯ ಕಾಯಿಲೆ; ಹೆಚ್ಚೇನೂ ತಿನ್ನಲಾಗುತ್ತಿರಲಿಲ್ಲ. ನನಗೆ ಆಶ್ರಮದಿಂದ ಆದೇಶವಾಗಿತ್ತು – ನಾನು ಅವರಿಗೆ ಸಂದೇಹವುಂಟಾಗುವ ಹಾಗೆ ಯಾವ ಕೆಲಸವನ್ನೂ ಮಾಡಬಾರದು ಅಂತ. ಅವರಿಗೆ ಅನಾರೋಗ್ಯವಿದ್ದುದರಿಂದ ಅವರಿಗೆ ವಿಶೇಷ ರೀತಿಯ ಊಟದ ವ್ಯವಸ್ಥೆ ಮಾಡಿದ್ದರು. ಆಗ ನನಗೆ ಇಪ್ಪತ್ತಮೂರು ವರ್ಷ ವಯಸ್ಸು; ಭಯವೆಂದರೇನೆಂದೇ ಗೊತ್ತಿರಲಿಲ್ಲ. ಅವರು ಹಾರ್ಲಿಕ್ಸ್ ಕುಡಿಯುತ್ತಿದ್ದರು. ಸ್ವಲ್ಪ ಕುಡಿದು ಹೇಳುತ್ತಿದ್ದರು, "ನೀನು ಇಡೀದಿನ ನನಗೋಸ್ಕರ ಕೆಲಸ ಮಾಡುತ್ತಿದ್ದೀಯಾ. ನಿನಗೆ ಇಂಥದೆಲ್ಲ ಕುಡಿಯಲು ಸಿಗುತ್ತದೆಯೆ? ತಗೋ, ಈ ಹಾರ್ಲಿಕ್ಸ್ ಸ್ವಲ್ಪ ಕುಡಿ." ಅದನ್ನು

ಪ್ರಸಾದರೂಪದಲ್ಲಿ ನೀಡುವಂತೆ ನನಗೆ ಕೊಡುತ್ತಿದ್ದರು. ನಾನು ಅದನ್ನು ಅವರ ಮುಂದೆಯೇ ಕುಡಿದುಬಿಡುತ್ತಿದ್ದೆ. ಹೀಗೆ ದಿನ ಕಳೆಯುತ್ತಿತ್ತು. ಅವರೊಂದಿಗೆ ಆನಂದಪಡುತ್ತ ನಾನು ಮೈಮರೆತುಬಿಡುತ್ತಿದ್ದೆ. ಅವರು ಮತ್ತು ನಾನು ಇಬ್ಬರೇ ಅಲ್ಲಿ ಇರುತ್ತಿದ್ದೆವು; ಬೇರೆ ಯಾರೂ ಅಲ್ಲಿಗೆ ಬರುತ್ತಿರಲಿಲ್ಲ. ಒಂದೆಡೆ ಸ್ವಾಮಿ ವಿರಜಾನಂದಜಿ ಮಹಾರಾಜರು ಅವರನ್ನು ಹಿಮಾಚಲ ಪ್ರದೇಶದಲ್ಲಿದ್ದ ಟಿ.ಬಿ. ಸ್ಯಾನಟೋರಿಯಂ ಆಸ್ಪತ್ರೆಗೆ ಚಿಕಿತ್ಸೆಗಾಗಿ ಕಳುಹಿಸುವ ವ್ಯವಸ್ಥೆ ಮಾಡಿದ್ದರು. ಸ್ವಾಮಿ ಮಾಧವಾನಂದಜಿಯವರ ಮೂಲಕ ಅವರು ಸಂದೇಶವನ್ನು ಕಳುಹಿಸಿದ್ದರು – ನಾನು ಅವರೊಂದಿಗೆ ಹೋಗಬೇಕು, ಇಲ್ಲದಿದ್ದರೆ ಅವರಿಗೆ ಅನಾನುಕೂಲವಾಗುವುದು ಎಂದು. ಅಲ್ಲಿಗೆ ಹೋದನಂತರ ಅಲ್ಲಿನ ಪರಿಸ್ಥಿತಿಯನ್ನೆಲ್ಲಾ ಅವರಿಗೆ ನಾನು ತಿಳಿಸಬೇಕೆಂದೂ ನನಗೆ ತಿಳಿಸಿದ್ದರು. ಇದನ್ನೆಲ್ಲ ಕೇಳಿ ಶಾಂತಾನಂದಜಿ ನನ್ನನ್ನು ಕೇಳಿದರು, "ಸಲಿಲ್, ಇವರೆಲ್ಲ ಸೇರಿ ನನ್ನನ್ನು ಕಾಶಿಯಿಂದ ಏಕೆ ದೂರ ಮಾಡುತ್ತಿದ್ದಾರೆ?" ನಾನೆಂದೆ, "ಸ್ವಾಮಿ ವಿರಜಾನಂದಜಿ ನಿಮ್ಮ ವಾಸಕ್ಕಾಗಿ ಪರ್ವತ ಪ್ರದೇಶದಲ್ಲಿರುವ ಒಂದು ಒಳ್ಳೆಯ ಸ್ಥಳದಲ್ಲಿ – ಅಂದರೆ ಪೈನ್ ಮರಗಳಿರುವ ಕಾಡಿನ ಮಧ್ಯೆ, ಒಂದು ಕ್ಯಾಬಿನ್ನನ್ನು ಬಾಡಿಗೆಗೆ ತೆಗೆದುಕೊಂಡಿದ್ದಾರೆ. ಹೋಗೋಣ ಮಹಾರಾಜ್, ಹೋಗಿ ನೋಡಿ ಬರೋಣ ಸ್ಥಳ ಹೇಗಿದೆ ಅಂತ." ಹೀಗೆಲ್ಲ ಹೇಳಿ ಅವರನ್ನು ಒಪ್ಪಿಸಬೇಕಾಯಿತು.

ಸ್ಟೇಶನ್ನಿನಿಂದ ಇಳಿದು ನೋಡಿದಾಗ ಟಿ.ಬಿ. ಸ್ಯಾನಟೋರಿಯಂನಿಂದ ಬಂದ ಕೆಲಸದವರು ಸ್ಟ್ರೆಚರನ್ನು ತೆಗೆದುಕೊಂಡು ಬಂದಿದ್ದರು. ಸ್ಟ್ರೆಚರನ್ನು ನೋಡಿ ಮಹಾರಾಜ್ ಕೇಳಿದರು: "ಸಲಿಲ್, ಈ ಸಾಧನ ಮತ್ತೆ ಈ ವ್ಯಕ್ತಿಗಳು ಇವೆಲ್ಲ ಇಲ್ಲಿ ಏಕೆ?" ನಾನು ಬೇರೇನು ಹೇಳಲಿ? ಸುಳ್ಳು ಹೇಳಬೇಕಾಯಿತು. ಅವರು ಅಂಬುಲೆನ್ಸ್‌ನತ್ತ ನೋಡಿ, "ಇದು ಟಿ.ಬಿ. ಆಸ್ಪತ್ರೆಯ ಅಂಬುಲೆನ್ಸ್" ಎಂದರು.

ನಾವು ಹಿಮಾಚಲ ಪ್ರದೇಶದ ಪ್ರಕೃತಿ ಸೌಂದರ್ಯವನ್ನು ನೋಡುತ್ತಿದ್ದ ಹಾಗೆ ನಮ್ಮ ಗಾಡಿ ಮುಂದೆ ಸಾಗುತ್ತಿತ್ತು. ಹೀಗೆ ಸಾಗುತ್ತ, ಆಸ್ಪತ್ರೆಯ ಗೇಟನ್ನು ತಲುಪಿದೆವು. ಮೇಲ್ಭಾಗದಲ್ಲಿ ದೊಡ್ಡದಾಗಿ ಬರೆದಿತ್ತು, "King Edward the Seventh Memorial T.B. Sanatorium." ಅಲ್ಲಿ ಒಳ್ಳೆಯ ವ್ಯವಸ್ಥೆಯಿತ್ತು. ಮಹಾರಾಜರಿಗೆ ಒಂದು ಕೋಣೆ, ನನಗೊಂದು ಪ್ರತ್ಯೇಕ ಕೋಣೆ, ಊಟದ ಕೊಠಡಿ, ಪ್ರತ್ಯೇಕ ಸ್ನಾನದ ಮನೆ – ಎಲ್ಲವೂ ಪ್ರತ್ಯೇಕ ಪ್ರತ್ಯೇಕ ಇದ್ದವು. ಪ್ರತಿಯೊಂದೂ ತುಂಬ ಚೆನ್ನಾಗಿತ್ತು. ಹೊರಗಡೆ ನೋಡಿದರೆ ಅರಣ್ಯದ ಸೊಬಗು. ಮಹಾರಾಜ್ ನನ್ನತ್ತ ನೋಡಿ, "ಓ! ನನಗೆ ಕ್ಷಯರೋಗ ಬಂದಿದೆ ಅಲ್ಲವೆ? ಅದಕ್ಕಾಗಿಯೇ ನನ್ನನ್ನು ಬೇರೆ ಕೋಣೆಯಲ್ಲಿ ಇಟ್ಟಿದ್ದಾರೆ" ಎಂದರು. ನಾನು ಇನ್ನೇನು ಹೇಳಲಿ? ಹೇಳುವುದು ಏನೂ ಉಳಿದಿಲ್ಲ. ನಾನಂತೂ ಸುಮ್ಮನಿದ್ದೆ. ಅವರೂ ತುಂಬ ಗಂಭೀರವಾಗಿಯೇ ಇದ್ದರು. ಅನಂತರ ಏನು ಮಾಡಿದರೂ ಅವರನ್ನು ಸಹಜಾವಸ್ಥೆಗೆ ತರಲಾಗಲಿಲ್ಲ. ಒಂದು ದಿನ ಕಳೆಯಿತು, ಎರಡು ದಿನವಾಯಿತು, ಮೂರನೇ ದಿನವೂ ಕಳೆಯಿತು. ಊಟದ ಸಮಯವಾದರೆ ನಾನು ಅವರಿಗೆ ಊಟ ಒದಗಿಸುತ್ತಿದ್ದೆ; ಅವರು ಊಟ ಮಾಡುತ್ತಿದ್ದರು. ನಿದ್ರಿಸುವ ಸಮಯವಾದಾಗ ನಿದ್ರಿಸುತ್ತಿದ್ದರು. ಅವರು ಬೇರೆಯೇ ಆದ ಒಂದು ಪ್ರಪಂಚವನ್ನು ಹೊಕ್ಕ ವ್ಯಕ್ತಿಯಂತಾಗಿದ್ದರು. ಯಾವ ಪ್ರಪಂಚದಲ್ಲಿ ನಾವು ಓಡಾಡುತ್ತಿದ್ದೇವೊ, ಅಥವಾ ಚಿಕಿತ್ಸೆ ನಡೆಯುತ್ತಿದೆಯೋ ಅದಕ್ಕೆ ಅವರು ಸೇರಿಲ್ಲ ಎಂಬಂತಿದ್ದರು. ಡಾಕ್ಟರ್ ಬರುತ್ತಾರೆ, ಪರೀಕ್ಷೆ ಮಾಡುತ್ತಾರೆ, ನಾನಾ ಬಗೆಯ ಪ್ರಶ್ನೆ ಕೇಳುತ್ತಾರೆ ಹಾಗೂ ಔಷಧಿ ಕೊಡುತ್ತಾರೆ. ಆದರೆ ಅವರು ಮಾತ್ರ ಉದಾಸೀನ ಭಾವದಿಂದಿದ್ದಾರೆ. ನಾನು ಭಾರೀ ತೊಂದರೆಯಲ್ಲಿ ಸಿಲುಕಿಕೊಂಡೆ. ನಾನು ಅವರಿಗೆ, "ಏನಾಯಿತು ಮಹಾರಾಜ್? ಒಂದು ಬಾರಿ ನನ್ನ ಮೇಲೆ ಕೃಪೆ ತೋರಿ" ಎಂದೆ. ಮನಸ್ಸು ಎಂಥ ತುಂಟತನ ಮಾಡುತ್ತದೆ! ನಾನಂದುಕೊಂಡೆ, ಮೃತ್ಯು ಎಂಥದು ಎಂಬುದನ್ನು ನಾನು ಎಂದೂ ನೇರವಾಗಿ ನೋಡಿಲ್ಲ. ಈ ಬಾರಿ ಮೃತ್ಯುವನ್ನು ನೇರ ನೋಡಬೇಕು ಎಂದು ನನಗನ್ನಿಸಿತು. ಇದಾದ ಮೇಲೆ ನನಗೆ ಎಲ್ಲೆಡೆ ಮೃತ್ಯುಭಯವೇ ಕಾಣಿಸತೊಡಗಿತು. ನನ್ನದು ಇನ್ನೂ ಪಳಗದ ಮನಸ್ಸು, ಆದ್ದರಿಂದ ಇಂಥ ಮನಸ್ಸು ಹಾಗೂ ಬುದ್ಧಿಯ ಮೂಲಕವೇ ಅವುಗಳ ಅವಸ್ಥೆಯನ್ನು ಕುರಿತು ಚಿಂತನೆ ನಡೆಸುತ್ತಿದ್ದೇನೆ! ಅವರ ಸದ್ಯದ ಪರಿಸ್ಥಿತಿಯನ್ನು ಕುರಿತು ಬೇಲೂರು ಮಠಕ್ಕೆ ತಿಳಿಸಬೇಕು ಅಂತ ನಾನು ಮನಸ್ಸಿನಲ್ಲೇ ಅಂದುಕೊಂಡೆ. ಐದನೇ ದಿನದಂದು ಬೇಲೂರು ಮಠಕ್ಕೆ ಪತ್ರ ಬರೆಯುತ್ತೇನೆ ಎಂದು ನಾನಂದುಕೊಂಡು ಮಹಾರಾಜರ ಬಳಿಗೆ ನಾನು ಹೋಗುತ್ತಿದ್ದಂತೆಯೇ ಅವರು ಬಾಯಿತುಂಬಾ ನಗುತ್ತ, "ನೀನು ಹೇಗಿದ್ದೀಯಾ? ಸ್ಥಳ ಚೆನ್ನಾಗಿದೆ ಅಲ್ಲವೆ?" ಎಂದು ಕೇಳಿದರು. ಅದನ್ನು ಕೇಳಿ ನನಗೆ ದಂಗು ಬಡಿದಂತಾಯಿತು. ಇಷ್ಟು ದಿನ ಇವರಿಗೆ ಏನಾಗಿತ್ತು? ಕೆಲಸ ಮಾಡುವ ನೆಪದಲ್ಲಿ ಅವರ ಸೇವೆ ಮಾಡುತ್ತ, ಬಹಳ ಸಣ್ಣ ಧ್ವನಿಯಲ್ಲಿ ಅವರನ್ನು ಕೇಳಿದೆ, "ಮಹಾರಾಜ್, ಇಷ್ಟು ದಿನ ನಿಮಗೆ ಏನಾಗಿತ್ತು? ನೀವು ಬೇರೆಯೇ ಪ್ರಪಂಚಕ್ಕೆ ಹೋಗಿ ಮಾಯವಾದಂತೆ ಇದ್ದಿರಲ್ಲ?" ಕೂಡಲೇ ಮಹಾರಾಜ್, "ಏನಾಯಿತು ಅಂತ ಕೇಳುತ್ತೀಯಾ, ಹೇಳಿದರೆ ನಂಬುತ್ತೀ ತಾನೆ? ಪೌರಾಣಿಕ ಕಥೆಯನ್ನು ಹೇಳಿದರೆ ನಿನಗೆ ನಂಬಿಕೆ ಉಂಟಾಗದು" ಎಂದರು. ನಾನೆಂದೆ, "ಇಲ್ಲ ಮಹಾರಾಜ್, ನೀವು ಹೇಳಿದರೆ ನಾನೇಕೆ ನಂಬದಿರಲಿ? ನೀವು ಏನು ಹೇಳುತ್ತೀರೋ ಹೇಳಿ." ಮಹಾರಾಜ್ ಹೇಳಿದರು: "ನನಗೆ ಟಿ.ಬಿ. ರೋಗ ಬಂದಿದೆ ಅಂತ ಇಲ್ಲಿಗೆ ಕರೆದುಕೊಂಡು ಬಂದಿರುವ ವಿಚಾರ ಗೊತ್ತಾದ ಕೂಡಲೇ ನನಗೆ ಆಲೋಚನೆ ಉಂಟಾಯಿತು, ನಾನು

ಹೆಡ್ಡತನ ಮಾಡುತ್ತಿದ್ದೇನೆ ಅಂತ. ನನ್ನ ಆರೋಗ್ಯದ ಬಗ್ಗೆ ನಾನು ಯಾವತ್ತೂ ಕಾಳಜಿ ವಹಿಸಲಿಲ್ಲ. ಪ್ರಸಾದ ಅಂತ ಹೇಳಿ ನಿನಗೆ ಎಷ್ಟೊಂದು ಎಂಜಲು ತಿನ್ನಿಸಿದ್ದೇನೆ. ಕಾಶಿಯಲ್ಲಾದರೆ ತಡೆಯಲಾಗದ ಚಳಿ, ಅಲ್ಲಿನ ಸಣ್ಣ ಕೋಣೆಯಲ್ಲಿ ಬಾಗಿಲು, ಕಿಟಕಿ ಮುಚ್ಚಿ ಇಬ್ಬರೂ ಒಂದೆಡೆ ತಿಂಗಳಾದ ಮೇಲೆ ತಿಂಗಳನ್ನು ಕಳೆದಿದ್ದೇವೆ. ನನ್ನ ಕಣ್ಣ ಮುಂದೆಯೇ ನೋಡುತ್ತಿದ್ದೆ, ನಿನ್ನ ಶರೀರ ಒಣಗಿ ಹೋಗುತ್ತಿದೆ. ನನಗಾಗ ಭಯವುಂಟಾಯಿತು, ನನಗೆ ಸೇವೆ ಮಾಡಲು ಹೋಗಿ ನಿನಗೆ ಟಿ.ಬಿ. ರೋಗ ತಗುಲಿಬಿಟ್ಟರೆ! ಹಾಗಾಗಿಬಿಟ್ಟರೆ, ಸತ್ತರೂ ನನಗೆ ಶಾಂತಿ ಸಿಗಲಾರದು. ನಿನ್ನದು ಇನ್ನೂ ಎಳೆಯ ವಯಸ್ಸು, ಆದರೆ ನನಗೆ ಹೊರಡುವ ಕಾಲ ಬಂದುಬಿಟ್ಟಿದೆ. ನನಗಾದರೋ ಯಾರೂ ಇಲ್ಲ, ಗತಿಯಿಲ್ಲದವರಿಗೆ ಏಕೈಕ ಗತಿ 'ಮಾತೆ' ಇದ್ದಾಳೆ. ಹೀಗಾಗಿ ಈ ಕೆಲವು ದಿನಗಳಿಂದ ನಾನು ಪ್ರತಿದಿನವೂ ನಿರಂತರ ಶ್ರೀಮಾತೆಯನ್ನು ಕರೆಯುತ್ತಿದ್ದೇನೆ – 'ಅಮ್ಮಾ, ನಾನು ನಿನ್ನ ನಾಮಸ್ಮರಣೆ ಮಾಡುತ್ತಿದ್ದುದು ನಿಜವಾಗಿದ್ದರೆ ನನಗೆ ಒಂದು ವರ ನೀಡು' ಅಂತ. ನಿನ್ನೆ ಮಧ್ಯರಾತ್ರಿ ಹೊತ್ತು ಶ್ರೀಮಾತೆ ದರ್ಶನಕೊಟ್ಟು, 'ನಿನಗೆ ಆಗಬೇಕಾಗಿರುವುದು ಇನ್ನೇನಿದೆ? ಆದರೂ ವರ ಕೇಳುತ್ತಿದ್ದೀಯಲ್ಲಾ!' ಎಂದರು. ನಾನು ಶ್ರೀಮಾತೆಗೆ ಹೇಳಿದೆ, 'ಅಮ್ಮಾ, ಈ ಹುಡುಗ ನನಗೋಸ್ಕರ ಮೃತ್ಯುಮುಖದಲ್ಲಿ ನಿಂತಿದ್ದಾನೆ. ನಾನು ನಿಮ್ಮ ಮೇಲೆ ಒಂದಿಷ್ಟಾದರೂ ಭಕ್ತಿಯನ್ನು ಹೊಂದಿದ್ದರೆ ನನಗೆ ಈ ವರವನ್ನು ಕರುಣಿಸಿ – ಈ ಹುಡುಗ ಬೇರೆ ಯಾವ ರೀತಿಯಲ್ಲಾದರೂ ಸತ್ತುಹೋಗಲಿ, ಆದರೆ ಅವನ ಜೀವನದಲ್ಲಿ ಎಂದಿಗೂ ಕ್ಷಯರೋಗ ಬಾರದಿರಲಿ. ಒಂದುವೇಳೆ ಹಾಗೇನಾದರೂ ಆದರೆ, ಸತ್ತರೂ ನನಗೆ ಶಾಂತಿ ಸಿಗಲಾರದು' ಅಂತ. ಅದಕ್ಕೆ ಶ್ರೀಮಾತೆ, 'ತಥಾಸ್ತು' ಎಂದರು."

ಇತ್ತ ಸ್ವಾಮಿ ವಿರಜಾನಂದರು ನನ್ನನ್ನು ಅಲ್ಲಿಂದ ಕರೆದುಕೊಂಡು ಹೋಗಲು ಅವಸರ ಮಾಡುತ್ತಿದ್ದರು. ನಮ್ಮೊಂದಿಗೆ ವಿಧಾನಬಾಬು, ಕಿರಣಶಂಕರ ಹಾಗೂ ಸ್ವಾಮಿ ಗಂಭೀರಾನಂದಜಿ ಇವರನ್ನು ಜೊತೆಮಾಡಿ ಬೇಲೂರು ಮಠಕ್ಕೆ ಕರೆತರಲು ವ್ಯವಸ್ಥೆ ಮಾಡಿದರು. ಬೇಲೂರು ಮಠಕ್ಕೆ ಬಂದ ಮೇಲೆ ನನ್ನನ್ನು ಡಾ. ತಡಿತ್ ಘೋಷ್ ಅವರ ಬಳಿಗೆ ಕಳುಹಿಸಿದರು. ಆಗ ಅವರೇ ಬೇಲೂರು ಮಠದ ಡಾಕ್ಟರ್ ಆಗಿದ್ದರು. ಅವರು ಅನೇಕ ಮಂದಿ ಸಾಧುಗಳ ಸೇವೆ ಮಾಡಿದ್ದರು. ಅವರು ನನಗೆ ಎಕ್ಸ್–ರೇ ಹಾಗೂ ಇತರ ಪರೀಕ್ಷೆಗಳನ್ನು ನಡೆಸಿದ ನಂತರ, 'ಒಳ್ಳೆಯ ಲಕ್ಷಣವೇನೂ ಕಾಣಿಸುತ್ತಿಲ್ಲ. ನಾನು ಮಹಾರಾಜರ ಬಳಿ ಮಾತನಾಡುತ್ತೇನೆ' ಎಂದರು. ಆಗ ದೇವಘರ್ ವಿದ್ಯಾಪೀಠದಲ್ಲಿ ಕಾಳಿದಾ ಮಹಾರಾಜ್ (ಸ್ವಾಮಿ ಆದಿನಾಥಾನಂದರು) ಇದ್ದರು. ಬೇಸಿಗೆ ರಜೆಯ ಸಮಯದಲ್ಲಿ ನನ್ನನ್ನು ಅಲ್ಲಿಗೆ ಕಳುಹಿಸಿಕೊಟ್ಟರು. ನನಗೆ ಊಟ ತಿಂಡಿ ಇವನ್ನೆಲ್ಲಾ ಚೆನ್ನಾಗಿ ನೀಡಿ ಹೊಸ ಚೈತನ್ಯ ಬರುವ ಹಾಗೆ ಮಾಡಬೇಕೆಂದು ಅವರು ಹಾಗೆ ಮಾಡಿದ್ದರು. ನನಗೆ ಹೊಟ್ಟೆಗೆ ಸಂಬಂಧಿಸಿದಂತೆ ಯಾವುದೋ ಸೋಂಕು ತಗಲಿದೆ ಎಂದು ಡಾಕ್ಟರ್ ಭಾವಿಸಿದ್ದರು. ಆಗ ನನಗೆ ತುಸು ಜ್ವರವೂ ಬರುತ್ತಿತ್ತು, ಚೆನ್ನಾಗಿ ಜೀರ್ಣವಾಗುತ್ತಿರಲಿಲ್ಲ. ಬಾಯಿರುಚಿ ಕೂಡ ಕೆಟ್ಟುಹೋಗಿತ್ತು. ನಾನು ಅಂದುಕೊಂಡೆ, ನನ್ನ ಹಣೆಬರಹದಲ್ಲಿ ನನ್ನ ಕೊನೆಗಾಲ ಹೀಗೇ ಇರುತ್ತದೆ ಅಂತ. ಶಾಂತಾನಂದಜಿಯವರಿಂದ ದೂರವಾಗಿಸಿ ನನ್ನನ್ನು ಇಲ್ಲಿಗೆ ಕಳುಹಿಸಿಬಿಟ್ಟರು. ಆದರೂ ಅನಂತರ ಸ್ವಾಮಿ ವಿರಜಾನಂದಜಿ ನನ್ನನ್ನು ಅವರ ಬಳಿಗೆ ಕಳುಹಿಸಿ ಕೊಟ್ಟಿದ್ದರು. ಇವರೇ 'ಶ್ರೀಮಾತೆ'. ಈಗಿನ ವಿಜ್ಞಾನಯುಗದಲ್ಲಿ ಶ್ರೀಮಾತೆಯವರನ್ನು ಪ್ರಾರ್ಥಿಸುವುದು, ಸಾಕ್ಷಾತ್ ಭಗವತಿಯ ದರ್ಶನಲಾಭ ಪಡೆಯುವುದು, ಅವರಿಂದ 'ವರ' ಕೇಳಿ ಪಡೆಯುವುದು – ಅದೂ ತನಗೋಸ್ಕರ ಅಲ್ಲ, ಇನ್ನೊಬ್ಬ ಹುಡುಗನ ಸಲುವಾಗಿ! ಇವನ್ನೆಲ್ಲ ಯಾರೂ ನಂಬದಿದ್ದರೆ ನಾನೇನು ಮಾಡಲಿ! ಈಗ ನನಗೆ ೮೩ ವರ್ಷ ವಯಸ್ಸು. ಚೆನ್ನಾಗಿಯೇ ಇದ್ದೇನೆ. ಸಾವಿನ ಮಾತೇ ಇಲ್ಲ. ಮಹಾಪುರುಷರ ಸತ್ಸಂಗದ ಲಾಭ ಇದೇ. ಒಂದೆಡೆ ಅಜಪಾ ಜಪವನ್ನು ಸಿದ್ಧಿಸಿಕೊಳ್ಳುವುದು ಹೇಗೆ ಎಂದು ಅವರು ತೋರಿಸಿಕೊಟ್ಟರು; ಇನ್ನೊಂದೆಡೆ ಕ್ಷಯ ರೋಗದಿಂದ ಪ್ರಾಣ ಹೋಗದಂತೆ ಸಾಕ್ಷಾತ್ ಜಗನ್ಮಾತೆಯನ್ನು ಪ್ರಾರ್ಥಿಸಿ, ನನ್ನ ಪ್ರಾಣರಕ್ಷಣೆ ಮಾಡಿದರು.

*(ಮುಂದುವರಿಯುವುದು)*

## ಜಗನ್ಮಾತೆ ಮತ್ತು ಕೃಪೆ

**ಬ್ರಹ್ಮಜ್ಞಾನದ ಕೀಲಿಕೈ ಜಗನ್ಮಾತೆಯ ಬಳಿ ಇರುತ್ತದೆ. ಅವಳ ಕೃಪೆಯಿಲ್ಲದೆ, ಅವಳು ದ್ವಾರ ತೆರೆದಲ್ಲದೆ ಯಾರೂ ಆ ಲೋಕವನ್ನು ಪ್ರವೇಶಿಸಲಾರರು.** *–ಸ್ವಾಮಿ ಬ್ರಹ್ಮಾನಂದ*

**ಒಂದು ಬಂಗಾಳಿ ಹಾಡಿದೆ :** *'ಓ ಮಾತೆ, ನೀನೆನ್ನ ಸಾಕಿ ಸಲಹಿರುವೆ; ನೀನಿರುವೆಯೆಂಬುದನು ನಾನರಿತರೂ, ಕಂಡಿಲ್ಲ ನಿನ್ನ ನಾನೊಂದು ಸಲವೂ!'* **–ಈ ಭಾವ ನನಗೆ ತುಂಬ ಹಿಡಿಸಿದೆ. ಜಗನ್ಮಾತೆ ಯಾವಾಗಲೂ ನಮ್ಮನ್ನು ಕಾಪಾಡುತ್ತಿದ್ದಾಳೆ, ಆದರೆ ನಮಗೆ ಮಾತ್ರ ಅವಳು ಕಾಣಿಸುತ್ತಿಲ್ಲ. ಇದು ಅವಳ ತಪ್ಪು ಎನ್ನಲಾಗದು. ಅವಳು ಯಾವಾಗಲೂ ನಮ್ಮೊಂದಿಗೇ ಇದ್ದಾಳೆ, ಆದರೆ ಅವಳನ್ನು ನೋಡುವ ಬಯಕೆ ನಮಗಿಲ್ಲ ಅಷ್ಟೆ. ನಾವು ರಾಗದ್ವೇಷ, ಬಯಕೆಗಳಿಗೆ ದಾಸರಾಗಿದ್ದರೆ ಅವಳನ್ನು ಹೇಗೆ ತಾನೆ ನೋಡಬಲ್ಲೆವು? ಈ ರಾಗದ್ವೇಷ, ಬಯಕೆಗಳೇ ನಮ್ಮನ್ನು ಅಜ್ಞಾನದ ಕತ್ತಲಲ್ಲಿ ಬಂಧಿಸಿವೆ.** *–ಸ್ವಾಮಿ ವಿಜ್ಞಾನಾನಂದ*

# ಆದ್ಯಾಶಕ್ತಿ



- ಯಾವಾಗ ಭಗವಂತ ಸೃಷ್ಟಿ, ಸ್ಥಿತಿ, ಪ್ರಳಯ ಕಾರ್ಯಗಳನ್ನು ಮಾಡುತ್ತಾನೋ, ಆಗ ಆತನಿಗೇ ಸಗುಣಬ್ರಹ್ಮ ಅಥವಾ ಆದ್ಯಾಶಕ್ತಿ ಅಂತ ಹೆಸರು; ಯಾವಾಗ ಆತನನ್ನು ತ್ರಿಗುಣಾತೀತ ಎಂಬುದಾಗಿ ಭಾವಿಸುತ್ತೇವೋ, ಆಗ ಆತನಿಗೆ ವಾಙ್ಮನಾತೀತ ನಿರ್ಗುಣಬ್ರಹ್ಮ ಅಂತ ಹೆಸರು.

- ಯಾರು ಶ್ಯಾಮೆಯೋ ಆತನೇ ಬ್ರಹ್ಮ. ಯಾರು ಸಾಕಾರನೋ ಆತನೇ ನಿರಾಕಾರ. ಯಾರು ಸಗುಣನೋ ಆತನೇ ನಿರ್ಗುಣ. ಬ್ರಹ್ಮನೇ ಶಕ್ತಿ; ಶಕ್ತಿಯೇ ಬ್ರಹ್ಮ. ಇಬ್ಬರಿಗೂ ಭೇದವಿಲ್ಲ. ಯಾರು ಸಚ್ಚಿದಾನಂದಮಯನೋ ಆತನೇ ಸಚ್ಚಿದಾನಂದಮಯಿ.

- ಭಗವದ್ರೂಪಗಳನ್ನು ಒಪ್ಪಿಕೊಳ್ಳಬೇಕು. ಜಗದ್ಧಾತ್ರೀ ರೂಪದ ಸಂಕೇತ ನಿನಗೆ ಗೊತ್ತೇ? ಯಾರು ಈ ಜಗತ್ತನ್ನು ಧಾರಣೆ ಮಾಡಿಕೊಂಡಿದ್ದಾಳೋ ಅವಳು. ಆಕೆ ಈ ಜಗತ್ತನ್ನು ಹೊತ್ತುಕೊಂಡಿರದಿದ್ದರೆ, ಪಾಲಿಸದಿದ್ದರೆ ಅದು ತನ್ನ ಸ್ಥಾನದಿಂದ ಕೆಳಕ್ಕೆ ಬಿದ್ದು ನಾಶವಾಗಿಬಿಡುತ್ತದೆ. ಮನಸ್ಸೆಂಬ ಆನೆಯನ್ನು ಯಾರು ವಶಪಡಿಸಿಕೊಳ್ಳುತ್ತಾನೊ ಆತನ ಹೃದಯದಲ್ಲಿ ಆಕೆ ವ್ಯಕ್ತವಾಗುತ್ತಾಳೆ. ಅದಕ್ಕೇ ಸಿಂಹವಾಹಿನಿಯ ಸಿಂಹ ಆನೆಯನ್ನು ಒಂದು ಹದ್ದುಬಸ್ತಿನಲ್ಲಿ ಇಟ್ಟುಕೊಂಡಿರುವುದು.

- ನಾವು ಏನನ್ನು ನೋಡುತ್ತೇವೊ, ಭಾವಿಸುತ್ತೇವೊ ಅವೆಲ್ಲ ಆದ್ಯಾಶಕ್ತಿಯೆ, ಚಿಚ್ಛಕ್ತಿಯ ಅಭಿವ್ಯಕ್ತಿಯೆ. ಸೃಷ್ಟಿ, ಪಾಲನೆ, ಸಂಹಾರ, ಜೀವ, ಜಗತ್ತು, ಧ್ಯಾನ, ಧ್ಯಾತಾ, ಭಕ್ತಿ, ಪ್ರೇಮ, ಎಲ್ಲಾ ಆಕೆಯ ಐಶ್ವರ್ಯ.

- ಆದರೆ ಬ್ರಹ್ಮನಿಗೂ ಶಕ್ತಿಗೂ ಅಭೇದ. ಲಂಕೆಯಿಂದ ಹಿಂದಿರುಗಿದ ನಂತರ ಹನುಮಂತ ರಾಮನನ್ನು ಸ್ತೋತ್ರ ಮಾಡುತ್ತಾ ಹೇಳಲಾರಂಭಿಸಿದ, 'ಹೇ ರಾಮ, ನೀನೇ ಪರಬ್ರಹ್ಮ, ಸೀತೆಯೇ ನಿನ್ನ ಶಕ್ತಿ; ಆದರೆ ನೀವಿಬ್ಬರೂ ಒಂದೇ – ಭೇದರಹಿತರು.' ಬ್ರಹ್ಮ, ಶಕ್ತಿ ಹಾವಿನ ಸೊಟ್ಟ ಸೊಟ್ಟ ಗತಿ ಇದ್ದ ಹಾಗೆ. ಹಾವನ್ನು ಭಾವಿಸಿದರೆ, ಅದರೊಡನೆ ಸೊಟ್ಟ ಸೊಟ್ಟ ಗತಿಯನ್ನೂ ಭಾವಿಸಲೇಬೇಕಾಗುತ್ತದೆ. ಹಾವಿನ ಸೊಟ್ಟ ಸೊಟ್ಟ ಗತಿಯನ್ನು ಭಾವಿಸಿದರೆ, ಅದರೊಡನೆ ಹಾವನ್ನೂ ಭಾವಿಸಲೇಬೇಕಾಗುತ್ತದೆ. ಹಾಲಿನ ಬಿಳಿ ಬಣ್ಣವನ್ನು ಭಾವಿಸಿದರೆ ಅದರೊಡನೆ ಹಾಲನ್ನೂ ಭಾವಿಸಲೇಬೇಕಾಗುತ್ತದೆ. ನೀರನ್ನು ಭಾವಿಸಿದರೆ, ಅದರೊಡನೆ ಅದರ ತೊಯ್ಯುವ ಶಕ್ತಿಯನ್ನೂ ಭಾವಿಸಲೇಬೇಕಾಗುತ್ತದೆ. ನೀರಿನ ತೊಯ್ಯುವ ಶಕ್ತಿಯನ್ನು ಭಾವಿಸಿದರೆ, ಅದರೊಡನೆ ನೀರನ್ನೂ ಭಾವಿಸಲೇಬೇಕಾಗುತ್ತದೆ.

- ಆದ್ಯಾಶಕ್ತಿ, ಎಂದರೆ ಮಹಾಮಾಯೆ ಬ್ರಹ್ಮನನ್ನು ಮುಚ್ಚಿಬಿಟ್ಟಿದೆ. ಈ ಆವರಣ ಹೋದ ಒಡನೇ ಅನುಭವವಾಗುತದೆ 'ಏನಾಗಿದ್ದೆನೋ ಅದೇ ಆಗಿದ್ದೇನೆ', 'ನಾನೇ ನೀನು; ನೀನೇ ನಾನು' ಅಂತ.

- ಅಲೆ ನೀರಿಗೆ ಸೇರಿದುದೇ ವಿನಾ ನೀರು ಅಲೆಗೆ ಸೇರಿದುದಲ್ಲ. ವ್ಯಕ್ತಿಯಲ್ಲಿ ಆವರಣ ವಿರುವವರೆಗೆ 'ತಾಯಿ, ತಾಯಿ' ಎಂದು ಕರೆಯುವುದೇ ಶ್ರೇಯಸ್ಕರ. ಭಕ್ತ ಭಗವಂತನನ್ನು ಸಂಬೋಧಿಸಿ ಹೇಳಬೇಕು: 'ನೀನು ತಾಯಿ, ನಾನು ನಿನ್ನ ಸಂತಾನ.' ಈ ಭಾವವೇ ಶ್ರೇಯಸ್ಕರ.

- ಯಾರು ಬ್ರಹ್ಮನೊ ಆತನೇ ಆದ್ಯಾಶಕ್ತಿಯಾಗಿದ್ದಾನೆ. ನಿಷ್ಕ್ರಿಯನಾಗಿರುವಾಗ ಆತನಿಗೇ ಬ್ರಹ್ಮ ಅಂತ ಹೆಸರು; ಪುರುಷ ಅಂತ ಹೆಸರು. ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯಗಳನ್ನು ಮಾಡುವಾಗ ಆತನಿಗೇ ಶಕ್ತಿ ಅಂತ ಹೆಸರು, ಪ್ರಕೃತಿ ಅಂತ ಹೆಸರು. ಪುರುಷ ಮತ್ತು ಪ್ರಕೃತಿ. ಯಾರು ಪುರುಷನೋ ಆತನೇ ಪ್ರಕೃತಿ. ಆನಂದಮಯನೇ ಆನಂದಮಯಿ.

- ಎಲ್ಲವೂ ಭಗವತಿಯೇ ಆಗಿರುವುದು. ದುಷ್ಟರೂ ಕೂಡ, ಭಾಗವತ ಪಂಡಿತನ ಸೋದರ ಕೂಡ. ದುಷ್ಟರನ್ನೂ ವರ್ಜಿಸಿಬಿಡುವ ಹಾಗಿಲ್ಲ. ತುಳಸೀದಳ ಒಣಗಿಹೋಗಲಿ ಅಥವಾ ಬಹಳ ಪುಟ್ಟದಾಗಿರಲಿ – ಪೂಜೆಗೆ ಆಗುತ್ತದೆ.

- ಯಾರಿಗೆ ಪುರುಷಜ್ಞಾನವಿರುವುದೋ ಅವರಿಗೆ ಪ್ರಕೃತಿ ಜ್ಞಾನವೂ ಇದ್ದೇ ಇರುತ್ತದೆ. ತಂದೆಯ ಜ್ಞಾನ ಇರುವವರಿಗೆ ತಾಯಿಯ ಜ್ಞಾನವೂ ಇದ್ದೇ ಇರುತ್ತದೆ. ಯಾರಿಗೆ ಕತ್ತಲೆಯ ಜ್ಞಾನವಿರುವುದೋ, ಅವರಿಗೆ ಬೆಳಕಿನ ಜ್ಞಾನವೂ ಇರುತ್ತದೆ. ಸುಖದ ಜ್ಞಾನ ಇರುವವರಿಗೆ ದುಃಖದ ಜ್ಞಾನವೂ ಇರುತ್ತದೆ.

- ಕುಮಾರಿ ಪೂಜೆ ಮಾಡುತ್ತಾರಲ್ಲ ಏಕೆ? ಎಲ್ಲಾ ಸ್ತ್ರೀಯರೂ ಭಗವತಿಯ ಒಂದೊಂದು ರೂಪ. ಆದರೆ ಶುದ್ಧಾತ್ಮಳಾದ ಕುಮಾರಿಯಲ್ಲಿ ಆಕೆ ವಿಶೇಷವಾಗಿ ವ್ಯಕ್ತವಾಗಿರುತ್ತಾಳೆ.

- ಒಮ್ಮೆ ನಾನು ರಾಮಲಾಲನ ತಾಯಿಯನ್ನು ಬಯ್ಯುವುದರಲ್ಲಿದ್ದು ತಡೆದುಕೊಳ್ಳಬೇಕಾಯಿತು. ಭಗವತಿಯ ಒಂದು ರೂಪವೇ ಆಗಿ ಅವಳು ಕಂಡುಬಂದಳು. ಕುಮಾರಿಯರ ಅಂತರ್ಯದಲ್ಲಿ ಭಗವತಿ ಕಾಣುವುದರಿಂದ ನಾನು ಅವರನ್ನು ಪೂಜಿಸುತ್ತಿದ್ದೇನೆ.

**'ಶ್ರೀರಾಮಕೃಷ್ಣ ವಚನವೇದ'**ದಿಂದ




# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

**ಭಾಗ ೧**



**ಸ್ವಾಮಿ ಅಖಂಡಾನಂದರು (೧೮೬೪–೧೯೩೭) ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಒಬ್ಬರು. ಗಂಗಾಧರ ಗಂಗೋಪಾಧ್ಯಾಯ ಎಂಬುದು ಅವರ ಮೊದಲಿನ ಹೆಸರು. ಶ್ರೀರಾಮಕೃಷ್ಣರ ವಿಶೇಷ ಪ್ರೀತಿ ಹಾಗೂ ಕೃಪೆಗೆ ಪಾತ್ರರಾಗಿದ್ದರು ಅವರು. ತಮ್ಮ ನೆಚ್ಚಿನ ಗುರುಗಳ ಮಹಾಸಮಾಧಿಯ ನಂತರ ಸ್ವಾಮಿ ವಿವೇಕಾನಂದರ ನೇತೃತ್ವದಲ್ಲಿ ಇತರ ಶಿಷ್ಯರೊಂದಿಗೆ ಸಂನ್ಯಾಸ ಸ್ವೀಕಾರ ಮಾಡಿ ಸ್ವಾಮಿ ಅಖಂಡಾನಂದರಾದರು. ಅನಂತರ ಸ್ವಾಮೀಜಿಯೊಂದಿಗೆ ಹಿಮಾಲಯದಲ್ಲೆಲ್ಲ ಓಡಾಡಿ ಪರಿವ್ರಾಜಕ ಜೀವನ ನಡೆಸಿದ ಅವರು ಟಿಬೆಟ್, ಚೀನಾ ದೇಶಗಳಲ್ಲೂ ಸುತ್ತಾಡಿ ಅಪಾರ ಅನುಭವ ಪಡೆದರು. ಶ್ರೀರಾಮಕೃಷ್ಣರ ಹಾಗೂ ಸ್ವಾಮಿ ವಿವೇಕಾನಂದರ ಸೇವೆಯ ಆದರ್ಶವನ್ನು ಮೊದಲ ಬಾರಿಗೆ ಅನುಷ್ಠಾನಕ್ಕೆ ತಂದ ಅವರು ರಾಮಕೃಷ್ಣ ಮಹಾಸಂಘದ ಪರಮಾಧ್ಯಕ್ಷರೂ ಆಗಿದ್ದರು. ಅವರೊಂದಿಗೆ ನಡೆದ ಮಾತುಕತೆಗಳನ್ನು ಸ್ವಾಮಿ ನಿರಾಮಯಾನಂದರು ಬಂಗಾಳಿಯಲ್ಲಿ 'ಸ್ವಾಮಿ ಅಖಂಡಾನಂದೇರ್ ಸ್ಮೃತಿ–ಸಂಚಯ್' ಎಂಬ ಗ್ರಂಥದಲ್ಲಿ ದಾಖಲಿಸಿದ್ದಾರೆ. ಈ ಕೃತಿ ೧೯೭೭ರಲ್ಲಿ ಪ್ರಕಟವಾಯಿತು. (ಇದು The Call of the Spirit ಎಂದು ಇಂಗ್ಲಿಷಿನಲ್ಲಿ ಪ್ರಕಟವಾಗಿದೆ). ಬಂಗಾಳಿ ಮೂಲದಿಂದ ಈ ಕೃತಿಯನ್ನು ಕನ್ನಡಕ್ಕೆ ಅಚ್ಚುಕಟ್ಟಾಗಿ ಅನುವಾದಿಸಿಕೊಟ್ಟಿರುವ ಲೇಖಕಿ, ವಾರಣಾಸಿ ರಾಮಕೃಷ್ಣ ಸೇವಾಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.**

### ಮುನ್ನುಡಿ

ಶ್ರೀಭಗವಾನ್ ರಾಮಕೃಷ್ಣರು ಹಾಗೂ ಅವರ ಅಂತರಂಗದ ಲೀಲಾಸಂಗಿಗಳು ಎಂದೆಂದಿಗೂ ಅಭೇದ. 'I and my father in Heaven are one'. ಪರಮಪೂಜ್ಯ ಅಖಂಡಾನಂದಜೀ ಅವರಲೊಬ್ಬರು. 'ಶಿವಜ್ಞಾನೇ ಜೀವಸೇವಾ' ಎಂಬ ಶ್ರೀರಾಮಕೃಷ್ಣರ ಉಕ್ತಿಯನ್ನು ಅವರು ತಮ್ಮ ಜೀವನದಲ್ಲಿ ಸಂಪೂರ್ಣವಾಗಿ ಕಾರ್ಯರೂಪಕ್ಕೆ ತಂದಿದ್ದರು. ಮುಂದಿನ ದಿನಗಳಲ್ಲಿ ಅವರು ಸಾರಗಾಛಿ ಆಶ್ರಮದಲ್ಲಿ ಸೇರುತ್ತಿದ್ದ ಭಕ್ತರ ಮುಂದೆ ತಮ್ಮ ಜೀವನದ ಕೆಲವು ಅನುಭವಗಳನ್ನು ಹೇಳಿದ್ದರು. ಮಹಾಭಾಗ್ಯಶಾಲಿಗಳೂ, ಸ್ವಾಮೀಜಿಯವರಿಗೆ ಪ್ರೀತಿಪಾತ್ರರೂ ಆದ ಲೇಖಕರು ಅವರ ಪದತಲದಲ್ಲಿ ಕುಳಿತು ಅವರ ಮಾತುಗಳನ್ನು ಕೇಳಿ ಡೈರಿಯಲ್ಲಿ ಬರೆದಿಟ್ಟುಕೊಂಡಿದ್ದರು. ಈಗ ಅವರು ಅವುಗಳನ್ನು ಪ್ರಕಟಿಸುವ ಮೂಲಕ ಧರ್ಮಪಿಪಾಸುಗಳ ಕೃತಜ್ಞತೆಗೆ ಪಾತ್ರರಾಗುವರೆಂಬುದರಲ್ಲಿ ಸಂದೇಹವೇ ಇಲ್ಲ. ಈ ನುಡಿಗಳೆಲ್ಲ ಭಗವದ್ಭಾವದಿಂದ ದೀಪ್ತವಾಗಿವೆ ಎಂಬುದು ನಿಃಸಂದೇಹ. ಈ ಸ್ಮೃತಿಸಂಚಯವನ್ನೋದಿ ಅದನ್ನು ಅಂತರ್ಗತ ಮಾಡಿಕೊಂಡವರೆಲ್ಲರಲ್ಲೂ ಆಧ್ಯಾತ್ಮಿಕ ಪ್ರೇರಣೆ ಉಂಟಾಗಲಿ ಎಂದು ಪ್ರಾರ್ಥಿಸುತ್ತೇನೆ.

**– ಧ್ಯಾನಾತ್ಮಾನಂದ**

**ಸಾರಗಾಛಿ, ೧೮೩೩ :** ಜನವರಿಯ ಕೊನೆ ಭಾಗ. ಸ್ವಾಮಿ ವಿವೇಕಾನಂದರ ಜನ್ಮತಿಥಿಯ ಮಾರನೆಯ ದಿನ. ಸಂಜೆಯ ಆರತಿಯ ಧ್ವನಿ ಪ್ರಾಂಗಣದಲ್ಲಿ ಸಂಪೂರ್ಣವಾಗಿ ಕಲೆತು ಕೃಷ್ಣಾ ಷ್ಟಮಿಯ ಅಂಧಕಾರದಲ್ಲಿ ಆಶ್ರಮವನ್ನೊಂದು ಮಧುರ ರಹಸ್ಯದಿಂದ ಆವರಿಸಿದೆ, ವಿಶಾಲವಾದ ಆಕಾಶದಡಿಯ ಅಸೀಮ ಶಾಂತಿಯಲ್ಲಿ ಆಶ್ರಮವು ಧ್ಯಾನಮಗ್ನವಾದಂತಿದೆ. ಕೆಲವು ಬ್ರಹ್ಮಚಾರಿ ಹಾಗೂ ಭಕ್ತರು ಶ್ರೀ ಬಾಬಾರವರ (ಸ್ವಾಮಿ ಅಖಂಡಾನಂದರನ್ನು ಸಂನ್ಯಾಸಿಗಳು ಹಾಗೂ ಭಕ್ತರು 'ಬಾಬಾ' ಎಂದೇ ಕರೆಯುತ್ತಿದ್ದರು.) ಸಮೀಪ ಬಂದು ಕುಳಿತಿದ್ದಾರೆ. ಬಾಬಾ ಕೋಣೆಯ ಹೊರಗಿನ ವರಾಂಡದಲ್ಲಿ ಕುರ್ಚಿಯಲ್ಲಿ ಕುಳಿತು ಶ್ರೀರಾಮಕೃಷ್ಣ ಮಂದಿರದ ಭಜನೆಯನ್ನು ಆಲಿಸುತ್ತಿದ್ದಾರೆ. ಭಜನೆ ಮುಗಿದು ಬಹಳ ಸಮಯದ ಮೌನದ ನಂತರ ಕೈಮುಗಿದು ಹೇಳುತ್ತಿದ್ದಾರೆ –

**ಅಸತೋ ಮಾ ಸದ್ಗಮಯ**
**ತಮಸೋ ಮಾ ಜ್ಯೋತಿರ್ಗಮಯ**
**ಮೃತ್ಯೋರ್ಮಾಽಮೃತಂ ಗಮಯ ।**

ತರುವಾಯ ಹೇಳಿದರು: "ಈಶೋಪನಿಷತ್ತಿನಲ್ಲಿದೆ, ಯಾರು ಆತ್ಮಜ್ಞಾನಕ್ಕಾಗಿ ಶ್ರಮಿಸುವುದಿಲ್ಲವೋ ಅವರು ಆತ್ಮಘಾತಕರು ಎಂದು. ಈ ಪ್ರಯತ್ನದಲ್ಲಿ ಯಾರ ಜೀವನವು ಕಳೆಯುತ್ತದೊ ಅವರೇ ಧನ್ಯರು. 'ಆತ್ಮ' ಎಂದರೇನು? ಆತ್ಮದ ವಿಚಾರವಾಗಿ ಮೊದಲು ಕೇಳಬೇಕು, ನಂತರ ಮನನ ಮಾಡಬೇಕು, ಅದಾದ ಮೇಲೆ ಧ್ಯಾನಿಸಬೇಕು. ಯಾಜ್ಞವಲ್ಕ್ಯರು ಮೈತ್ರೇಯಿಗೆ ತಿಳಿಸಿಕೊಡುತ್ತಿದ್ದರು. ಆತ್ಮವೇ ಎಲ್ಲಕ್ಕಿಂತ ಪ್ರಿಯವಾದುದು. ಆತ್ಮಕ್ಕಾಗಿಯೇ ಎಲ್ಲವೂ ಪ್ರಿಯವು:

**ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ**
**ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ।**

**ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತಿ**
**ಆತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ।**
**ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ**
**ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ॥** *(ಬೃ.೪.೫.೬)*

"ಆತ್ಮವಸ್ತು ಮಾತ್ರವೇ ಇರುವುದು, ಮತ್ತಿನ್ನೇನೂ ಇಲ್ಲ. ಆತ್ಮದಿಂದಲೇ ಎಲ್ಲವೂ, ಆತ್ಮದಲ್ಲಿಯೇ ಎಲ್ಲವೂ. ಎಲ್ಲದರಲ್ಲೂ ಇದೇ ಆತ್ಮವಿದೆ, ಕೆಲವೆಡೆ ಸುಪ್ತವಾಗಿರುವುದು. ಅದನ್ನು ಜಾಗೃತಗೊಳಿಸಬೇಕು. ಆತ್ಮವನ್ನು express ಮಾಡಲು (ಪ್ರಕಾಶಗೊಳಿಸಲು) ಎಲ್ಲರೂ ಸತತವಾಗಿ ಪ್ರಯತ್ನಿಸುತ್ತಿದ್ದಾರೆ. ಆ ಪ್ರಯತ್ನವೇ ಸಾಧನೆ. ಅದಕ್ಕಾಗಿ ಏನು ಮಾಡುತ್ತೇವೋ ಅದೇ ಸಾಧನೆ – ತಿಳಿದು ಮಾಡಿದರೂ, ತಿಳಿಯದೆ ಮಾಡಿದರೂ ಕೂಡ. ಈ ಆತ್ಮದ ಅನುಭೂತಿಯಾದಾಗ ಅದರ ಅಸ್ತಿತ್ವವು ಎಲ್ಲೆಡೆಯೂ ಗೋಚರಿಸುವುದು. ಅದೇ ಸಿದ್ಧಿ. ಇದನ್ನು ಪಡೆ ಯುವುದೇ ನಮ್ಮ ಗುರಿ. ಎಲ್ಲರೂ ಈ ಅನುಭೂತಿಯನ್ನು ಮತ್ತೆ ಪಡೆಯಬೇಕು. ಏಕೆಂದರೆ ಇದೇ ನಮ್ಮ ನಿಜಸ್ವರೂಪ. 'ನನಗದು ಅಸಾಧ್ಯ, ನಾನು ದುರ್ಬಲ' ಎಂದುಕೊಳ್ಳಬೇಡಿ. ಗೀತೆಯಲ್ಲಿ ಭಗವಂತನು ಹೇಳುತ್ತಾನೆ – ವಿಷಾದವುಂಟಾದಾಗಲೆಲ್ಲ ಈ ಮಾತನ್ನು ನೆನಪಿನಲ್ಲಿಡಬೇಕು :

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥** *(೨.೩)*

" 'ನನಗೆ ಸಾಧ್ಯವಿಲ್ಲ, ಇದು ನನ್ನಿಂದ ಆಗುವುದಿಲ್ಲ' ಎಂದು ಅರ್ಜುನನು ಅಂದುಕೊಂಡಿದ್ದನು. 'ಬಂಧುಬಾಂಧವರಿಗೆಲ್ಲ ದುಃಖ, ಕಷ್ಟಗಳನ್ನು ಕೊಡುವುದಕ್ಕಿಂತ ಮರಣವೇ ಲೇಸು. ಭಿಕ್ಷೆ ಬೇಡಿ ತಿನ್ನುವುದೇ ಒಳ್ಳೆಯದು.' ಭಗವಂತನು ತನ್ನ ಸಾರಥಿ, ಗುರು, ಸ್ನೇಹಿತ ಎಂಬುದನ್ನು ಅರ್ಜುನ ಮರೆತಿದ್ದಾನೆ, ಮಾಯೆಯಲ್ಲಿ ಮುಳುಗಿದ್ದಾನೆ. ಆದ್ದರಿಂದ ಭಗವಂತನು ಅವನಿಗೆ ಆತ್ಮಜ್ಞಾನವನ್ನು ಹೊಂದಲು ಉತ್ತೇಜಿಸುತ್ತಿದ್ದಾನೆ. ಪ್ರತಿ ಯುಗದಲ್ಲಿಯೂ ಆತನು ಅದಕ್ಕಾಗಿ ಬರುತ್ತಿದ್ದಾನೆ.

"ಆತನನ್ನು ಪಡೆಯುವುದೇನು ಸುಲಭವೆ? ಅವತಾರ ಪುರುಷರು ಸಾಕ್ಷಾತ್ ಭಗವಂತನೇ. ಅವರೂ ಅದೆಷ್ಟು ತಪಸ್ಸು–ಸಾಧನೆಗಳನ್ನು ಮಾಡಬೇಕಾಗುವುದು! ಬೇರೆಯವರ ಮಾತನ್ನು ಬಿಡಿ. ಪೂರ್ಣ ಮನಸ್ಸಿನಿಂದ ಆತನನ್ನು ಪ್ರಾರ್ಥಿಸುತ್ತ ಹೋಗುವುದನ್ನು ಬಿಟ್ಟರೆ ಬೇರೆ ಮಾರ್ಗವಿಲ್ಲ. ಆತನಿಗೆ ಹೇಳಬೇಕಾದುದಿಷ್ಟೆ – 'ದರ್ಶನ ನೀಡು, ದರ್ಶನ ನೀಡು. ನನಗಿನ್ನೇನೂ ಬೇಡ, ಸ್ವರ್ಗಸುಖವೂ ಬೇಡ. ನನಗೆ ಬೇಕಾದುದು ನೀನು ಮಾತ್ರ', 'ಪ್ರಭು, ನನ್ನ ಭೋಗವಾಸನೆಗಳನ್ನು ಅಳಿಸಿಹಾಕು' ಎಂದು ಜೊತೆಯಲ್ಲೇ ಪ್ರಾರ್ಥಿಸಬೇಕು.

"ಸ್ವಾರ್ಥಪರತೆ, ಸಂಕೀರ್ಣತೆಗಳಿರುವಾಗ ಆತ್ಮೋನ್ನತಿಯು ಅಸಂಭವ. ಸುಖಭೋಗಗಳ ಇಚ್ಛೆ ಎಳ್ಳಷ್ಟಿದ್ದರೂ ನಡೆಯದು. ಪ್ರಭು, ನಾನೇಕೆ ಸುಖವನ್ನು ಬೇಡಲಿ? ನೀನೆಷ್ಟು ಬಾರಿ ದೇಹ ಧಾರಣೆಯನ್ನು ಮಾಡಿ ಬಂದಿರುವೆ! ನಿನಗೆಂದೂ ಸುಖವು ದೊರೆಯಲಿಲ್ಲ. ನೀನು ಎಲ್ಲರಿಗಿಂತಲೂ ಹೆಚ್ಚಾಗಿಯೇ ದುಃಖ ಜೀವನವನ್ನು ನಡೆಸಿ ಹೋಗಿದ್ದೀಯೆ. ರಾಮನ ರೂಪತಾಳಿ ರಾಜಪುತ್ರನಾಗಿ ಬಂದಾಗ ಜೀವನದ ಶ್ರೇಷ್ಠ ಭಾಗವನ್ನು ವನವಾಸದಲ್ಲಿ ಕಳೆದಿರುವೆ. ವನವಾಸವನ್ನು ಕಳೆದಾಗ ಎಷ್ಟು ಕಷ್ಟಪಟ್ಟು ಸೀತೆಯ ಉದ್ಧಾರವಾಯಿತು! ಆಮೇಲೆ ನೀನು ಸೀತೆಯನ್ನು ಕಳೆದುಕೊಂಡೆ. ಕೃಷ್ಣನ ರೂಪದಲ್ಲಿ ರಾಜನ ಪುತ್ರನಾಗಿ ಕಾರಾಗೃಹದಲ್ಲಿ ಜನ್ಮವೆತ್ತಿದೆ! ಅನಂತರ ಬಾಲ್ಯದಲ್ಲಿ ತಾಯ ಹಾಲಿನಿಂದಲೂ ವಂಚಿತನಾದೆ! ಗೋಪಾಲರ ಮನೆಯಲ್ಲಿ ಬೆಳೆದೆ! ಜೀವನವಿಡೀ ಬರಿಯ ಯುದ್ಧ ಹಾಗೂ ದುಷ್ಟಸಂಹಾರ! ಎಂದೂ ಶಾಂತಿ ಸಿಗಲಿಲ್ಲ; ಜಗತ್ತಿನಲ್ಲಿ ಶಾಂತಿಸ್ಥಾಪನೆಯ ಪ್ರಯತ್ನ ಮಾಡಿದರೂ ಕುರುಕ್ಷೇತ್ರದ ಅಶಾಂತಿಗೆ ನೀನೇ ಹೊಣೆಯೆಂದು ದೂಷಿಸಿದರು. ನೀನು ಶಾಪಗ್ರಸ್ತನಾದೆ. ಸಿಂಹಾಸನಕ್ಕಾಗಿ ಲೀಲೆಯನ್ನಾಡಿದೆ, ಆದರೆ ಎಂದೂ ಸಿಂಹಾಸನದಲ್ಲಿ ಕೂರಲಿಲ್ಲ. ನಿನ್ನ ಕಣ್ಣೆದುರೇ ಬಂಧುಬಾಂಧವರೆಲ್ಲರೂ ಸಾಯುತ್ತಿರುವುದನ್ನು ನೋಡಿದೆ. ಕೊನೆಗೆ ವಿನಾಕಾರಣ ವ್ಯಾಧನ ಬಾಣದಿಂದ ಪ್ರಾಣವನ್ನು ಕಳೆದುಕೊಂಡೆ! ಬುದ್ಧರೂಪದಲ್ಲಿ, ಕ್ರಿಸ್ತರೂಪದಲ್ಲಿ ಜೀವನದುದ್ದಕ್ಕೂ ಎಷ್ಟೊಂದು ಕಷ್ಟಗಳನ್ನನುಭವಿಸಿದೆ! ಅದೆಷ್ಟೋ ದಿನ ಮಲಗಲು ಸ್ಥಳವೂ ಸಿಗಲಿಲ್ಲ! ಆಮೇಲೆ ನಿನ್ನ ಈ ನೂತನ ರೂಪದಲ್ಲಿ, ನಿನ್ನ ಹಿಂದಿನ ಅಭಿವ್ಯಕ್ತಿಗಳಾವುವೂ ಸುಳ್ಳಲ್ಲ, ಧರ್ಮಜೀವನವೆಂದರೆ ಹಗಲುಗನಸಲ್ಲ; ಭೋಗ ಎಂದಿಗೂ ಗುರಿಯಲ್ಲ ಎಂದು ಜಗತ್ತಿಗೆ ತೋರಿಸಿಕೊಡಲು ಅದೆಷ್ಟು ಕಷ್ಟಪಟ್ಟೆ!

"ದೀನತೆಯ ಅವತಾರ! ಉದ್ಧತ ಜಗತ್ತಿಗೆ ದೈನ್ಯತೆಯನ್ನು ಕಲಿಸಲು ಬಂದಿದ್ದರೂ ನಿನ್ನಲ್ಲಿ ಯಾವ ಬಾಹ್ಯಾಡಂಬರವೂ ಇರಲಿಲ್ಲ. ಒಬ್ಬ ಶ್ರೀಮಂತ ಅವರನ್ನು ತೋಟದ ಮಾಲಿ ಎಂದೆಣಿಸಿ, ಅವರ ಬಳಿಸಾರಿ ಹೂ ಕೇಳಿದ್ದರು. ಕೂಡಲೇ ಅವರು ಹೋಗಿ ಹೂವನ್ನು ಕಿತ್ತು ತಂದುಕೊಟ್ಟಿದ್ದರು. ಇದೇ ರೀತಿ ಅವರನ್ನು ಒಮ್ಮೆ ಕೆಲಸದವನೆಂದು ಭಾವಿಸಿ ತಂಬಾಕು ಅಣಿಮಾಡಲು ಹೇಳಿದರು. ಕೂಡಲೆ ಅವರು ತಂಬಾಕು ಅಣಿಮಾಡಿ ಕೊಟ್ಟಿದ್ದರು. ದೀನರ ಎಂಜಲನ್ನು ಬಳಿದಿದ್ದರು. ಜಾಡಮಾಲಿಯ ಪಾಯಿಖಾನೆಯನ್ನು ಸ್ವಚ್ಛಗೊಳಿಸಿದ್ದರು!

"ಕೇವಲ ನಾಮಜಪ ಮತ್ತು ನಿರಂತರ ಭಗವಂತನ ಚಿಂತನೆ, ಧ್ಯಾನ ಇವಲ್ಲದೆ ನಮಗೆ ಬೇರೆ ಮಾರ್ಗವಿಲ್ಲ. ಮನಶ್ಶುದ್ಧಿಗಾಗಿ ನಿಷ್ಕಾಮ ಕರ್ಮ–ಸೇವಾಧರ್ಮವನ್ನು ಮಾಡ ಬೇಕು.

"ಶ್ರೀಚೈತನ್ಯದೇವರು ವಿಶೇಷವಾಗಿ ನಾಮಜಪದ ಪ್ರಚಾರಕ್ಕಾಗಿ ಬಂದರು:

**ನಾಮ್ನಾಮಕಾರಿ ಬಹುಧಾ ನಿಜಸರ್ವಶಕ್ತಿ–**
**ಸ್ತತ್ರಾರ್ಪಿತಾ ನಿಯಮಿತಃ ಸ್ಮರಣೇ ನ ಕಾಲಃ ।**
**ಏತಾದೃಶೀ ತವ ಕೃಪಾ ಭಗವನ್ಮಮಾಪಿ**
**ದುರ್ದೈವಮೀದೃಶಮಿಹಾಜನಿ ನಾನುರಾಗಃ ॥**

[ನಿನಗೆ ಅನೇಕ ಹೆಸರುಗಳುಂಟು, ಎಲ್ಲದರಲ್ಲಿಯೂ ಒಂದೇ ರೀತಿಯ ಶಕ್ತಿ, ಸ್ಮರಣೆ ಮಾಡಲು ಯಾವ ನಿಯಮಿತ ಕಾಲವೂ ಇಲ್ಲ. ಇಷ್ಟಬಂದಾಗ ಮಾಡಬಹುದು. ಸ್ವಾಮಿ, ನಿನ್ನ ದಯೆ

ಅಪಾರವಾದುದು. ಆದರೂ ನಾನೆಷ್ಟು ದುರ್ಭಾಗ್ಯನೆಂದರೆ ನಿನ್ನ ಅಷ್ಟೊಂದು ಹೆಸರುಗಳಲ್ಲಿ ಒಂದರ ಮೇಲೂ ನನಗೆ ಅನುರಾಗವುಂಟಾಗಲಿಲ್ಲ....]

"ವರ್ತಮಾನ ಯುಗಧರ್ಮವು ಎಲ್ಲ ಯುಗಧರ್ಮಗಳ ಸಮನ್ವಯವೂ ಆಗಿದೆ – ಜ್ಞಾನ, ಭಕ್ತಿ ಹಾಗೂ ಕರ್ಮ. ಜ್ಞಾನ, ಭಕ್ತಿ, ಕರ್ಮಗಳೆಲ್ಲವೂ ಆವಶ್ಯಕ. ಬರಿಯ ಒಂದರಿಂದ ಆಗದು, ಎಲ್ಲವೂ ಅತ್ಯಗತ್ಯ. ಶ್ರೀರಾಮಕೃಷ್ಣ – ಸ್ವಾಮಿ ವಿವೇಕಾನಂದ ರದು ಪರಿಪೂರ್ಣ ಆದರ್ಶ. ಈ ಜ್ವಲಂತ ಆದರ್ಶಗಳನ್ನು ನಮ್ಮೆದುರು ಇಟ್ಟುಕೊಂಡು ನಡೆಯಬೇಕು. ಇನ್ನೇನು ಹೇಳಲಿ?

"ಇದೇ ತ್ಯಾಗ, ತಪಸ್ಸು, ಸಾಧನೆ. ಮತ್ತೆ ಇದೇ ಪ್ರೇಮವೂ ಕೂಡ. ಸಕಲರ ದುಃಖದಲ್ಲಿ ಅನುಕಂಪ, ಅವರ ದುಃಖವನ್ನು ನಿವಾರಿಸಲು ಜೀವನದುದ್ದಕ್ಕೂ ಪ್ರಯತ್ನಿಸುವುದು – ಇದೇ ಜೀವನ, ಇದೇ ಧ್ಯೇಯ. ಜೀವನದ ಪ್ರತಿಯೊಂದು ಹೆಜ್ಜೆಯಲ್ಲೂ ಇದೇ ಆದರ್ಶವನ್ನಿಟ್ಟುಕೊಂಡು ನಡೆಯಿರಿ. ಅದರಿಂದಲೇ ಎಲ್ಲವೂ ಸಿದ್ಧಿಸುವುದು. ನಿಶ್ಚಯವಾಗಿಯೂ ಅದು ಆಗುವುದು. ನಾವು ಆತನಿಂದ ದೂರವಿಲ್ಲ, ನಾವು ಅವನಿಗೆ ಅನ್ಯರಲ್ಲ. 'ಹಾಗಾಗುವುದು' ಎಂದು ಆತ ಭರವಸೆಯನ್ನು ನೀಡಿದ್ದಾನೆ, ನಾನು ಹೇಳುತ್ತಿದ್ದೇನೆ."

**೮ ಮಾರ್ಚ್ ೧೯೩೫:** ರಾತ್ರಿ ೮.೩೦ರ ವೇಳೆಗೆ ಭಕ್ತನು ರೈಲಿ ನಲ್ಲಿ ಬಂದು ತಲುಪಿದನು. 'ಹಾಲ್'ನಲ್ಲಿ ಕಾಲಿಡುತ್ತಲೇ ಬಾಬಾ ಅವನಿಗಾಗಿಯೇ ಇಷ್ಟು ಹೊತ್ತು ಹೊರಗಡೆ ಹಾಲ್ ನಲ್ಲಿ ಕುರ್ಚಿಯಲ್ಲಿ ಕಾದು ಕುಳಿತಿರುವುದಾಗಿ ಹೇಳಿದರು. ಅವನು ಪ್ರಣಾಮ ಮಾಡಿ ಏಳುತ್ತಲೇ, "ನನಗಾಗಿ ಏನೇನು ತಂದಿರುವೆ?" ಎಂದು ಕೇಳಿದರು. ಭಕ್ತನು ಹಣ್ಣು, ಮಿಠಾಯಿ ಮುಂತಾದವುಗಳನ್ನು ಕೊಟ್ಟನು. ಬಾಬಾ ಬಹಳ ಸಂತೋಷ ದಿಂದ ಅವುಗಳನ್ನು ಸ್ವೀಕರಿಸಿದರು. ಭಕ್ತನು ಕುರ್ಚಿಯ ಬಳಿ ಯಲ್ಲೇ ನೆಲದ ಮೇಲೆ ಕುಳಿತನು.

ಬಾಬಾ ಹೇಳತೊಡಗಿದರು – "ಉದ್ದುದ್ದ ಉಪದೇಶ ದಿಂದ ಕೂಡಿದ ಪತ್ರಗಳನ್ನು ಬರೆಯುತ್ತೇನೆ ಅಥವಾ ಅನೇಕ ಮಾತುಗಳನ್ನಾಡುತ್ತೇನೆ, ಎಂದುಕೊಳ್ಳಬೇಡ. ಅವೆಲ್ಲ ನನ್ನಿಂದ ಸಾಧ್ಯವಿಲ್ಲ. ನನಗೆಷ್ಟು ಕೆಲಸವಿದೆ, ಹಾಗೂ ಈಗ ನನಗೆಷ್ಟು ವಯಸ್ಸು, ನೋಡುತ್ತಿರುವೆಯಲ್ಲ? ಗುರುಗಿರಿ ಮಾಡುವುದು ನಮ್ಮ ಕರ್ಮವಲ್ಲ. ಯಾರು ನಿಜವಾಗಿಯೂ ಆತನನ್ನು ಪ್ರೀತಿಸು ವರೋ, ಆತನನ್ನು ಪಡೆಯಲಿಚ್ಛಿಸುವರೋ– ಅವರು ಬಂದಾಗ ಕಷ್ಟವೆನಿಸುತ್ತದೆ. ಅವರ ಬಗ್ಗೆ ಹೇಳುತ್ತೇನೆ, 'ಠಾಕೂರ್, ಇಲ್ಲಿ ನೋಡು, ನಿನ್ನ ಭಕ್ತರು ಬಂದಿದ್ದಾರೆ. ನೀನವರನ್ನು ಸ್ವೀಕರಿಸು,' ಎಂದು ಅವರ ಬಳಿ ಒಪ್ಪಿಸಿಬಿಡುತ್ತೇನೆ. ಮಾಡಬೇಕಾದ್ದನ್ನು ಅವರು ಮಾಡುತ್ತಾರೆ.

"ಅವರನ್ನು ಪ್ರೀತಿಸುವ ಬಗೆಯೆಂದರೆ ವ್ಯಾಕುಲತೆಯಿಂದ ಕರೆಯುವುದು. ಅವರಲ್ಲದೆ ನಿನ್ನವರಾರೂ ಇಲ್ಲ – ಇದನ್ನು ತಿಳಿ. ಅವರೊಬ್ಬರೇ ಇರುವವರು, ಅವರೇ ಎಲ್ಲವೂ ಆಗಿರು ವರು. ನೀನು ಅವರ ಸ್ವರೂಪವನ್ನು ಪಡೆಯಲಿಚ್ಛಿಸಿದ್ದರೆ, 'ಪ್ರಭು, ದರ್ಶನ ನೀಡು – ಯಾರು ಇಲ್ಲಿಗೆ ಬರುವರೋ ಅವರಿಗೆ ನೀವು ದರ್ಶನ ಕೊಡುತ್ತೀರೆಂದು ನೀವೇ ಹೇಳಿದ್ದೀರಿ. ನಿಮ್ಮ ಪ್ರತಿಜ್ಞೆಗೆ ನೀವು ಬದ್ಧರಾಗಿದ್ದೀರಿ' ಎಂದು ಭಗವಂತನಿಗೆ ಹೇಳು.

"ಖಂಡಿತವಾಗಿಯೂ ಆತನು ದರ್ಶನವನ್ನು ನೀಡುವನು. ಆತ ನಿನ್ನಿಂದ ಅಪೇಕ್ಷಿಸುವುದು ಒಂದು ವಸ್ತುವನ್ನು ಮಾತ್ರ– ವ್ಯಾಕುಲತೆ, ಆಗ್ರಹ. ಆತನಿನ್ನೇನನ್ನೂ ಹೇಳಿಲ್ಲ. ಇದನ್ನು ಮಾತ್ರವೇ ಹೇಳಿರುವನು. 'ಪ್ರಭು, ವ್ಯಾಕುಲತೆಯನ್ನು ನೀಡು' ಎಂದು ಪ್ರಾರ್ಥಿಸು."

**ಮಾರನೆಯ ದಿನ ಸಂಜೆ:** ಬಾಬಾ ಆರತಿಯ ನಂತರ ಕುರ್ಚಿ ಯಲ್ಲಿ ಸುಮ್ಮನೆ ಕುಳಿತಿದ್ದಾರೆ. ಇನ್ನೂ ಯಾರೂ ಪ್ರಣಾಮ ಮಾಡಲು ಬಂದಿಲ್ಲ. ಕೈಜೋಡಿಸಿ ಗಂಭೀರ ಧ್ವನಿಯಲ್ಲಿ ಪ್ರಾರ್ಥಿಸುತ್ತಿದ್ದಾರೆ:

**ಓಜೋಽಸಿ ಓಜೋ ಮಯಿ ಧೇಹಿ।**
**ತೇಜೋಽಸಿ ತೇಜೋ ಮಯಿ ಧೇಹಿ।**
**ವೀರ್ಯಮಸಿ ವೀರ್ಯಂ ಮಯಿ ಧೇಹಿ।**
**ಸಹೋಽಸಿ ಸಹೋ ಮಯಿ ಧೇಹಿ।**
**ಬಲಮಸಿ ಬಲಂ ಮಯಿ ಧೇಹಿ॥**

ತರುವಾಯ ತಮ್ಮಲ್ಲೇ ಹೇಳುತ್ತಿದ್ದಾರೆ: "ಬ್ರಹ್ಮ ನಿರೂಪಣೆ? ಹಲ್ಲುಕಿರಿದು ನಕ್ಕಂತೆ. ನಾನು ನಗದಿದ್ದರೂ ನಗುತ್ತಿದೆ. ನಿರೂಪಣೆ ಮಾಡದಿದ್ದರೂ ನಿರೂಪಿತವಾಗಿದೆ. ನಿನ್ನ ನಿರೂಪಣೆಯ ಅಪೇಕ್ಷೆಯಿಲ್ಲ – ನಿರಪೇಕ್ಷತೆ, ಸೂರ್ಯನಂತೆ ಝಗಝಗನೆ ಪ್ರಕಾಶಿಸುತ್ತಿದ್ದರೂ ನಿನ್ನ ಕಣ್ಣುಗಳನ್ನು ಕಟ್ಟಲಾಗಿರುವುದರಿಂದ ನಿನಗೆ ಕಾಣಿಸುತ್ತಿಲ್ಲ. ಮನಸ್ಸಿನಲ್ಲಿ ಕೊಳೆಯಿದೆ, ಅದನ್ನು ಒರೆಸಿ ಕೊಳ್ಳಬೇಕು. ಅದೇ ಸಾಧನೆ. ಎಂತಹ surrounding ನಲ್ಲಿ (ಪರಿಸರದಲ್ಲಿ) ಇರುತ್ತೀಯೋ ಆ ರೀತಿಯೇ ಮನಸ್ಸಿನ ಗ್ರಹಿಕೆ, ವಿಶ್ವಾಸಗಳು ಬೆಳೆಯುವುವು. ಆದ್ದರಿಂದಲೇ **'ಬ್ರಹ್ಮ ಸತ್ಯಂ ಜಗನ್ಮಿಥ್ಯಾ'** ಎಂಬ ತತ್ತ್ವವನ್ನು ಸರ್ವದಾ ಅನುಭವಿಸುತ್ತಿರುವ ಸಾಧುಗಳ ಸಂಗ ಅಗತ್ಯ.

" 'ಸಾಧು' ಎಂದರೆ ಯಾರು? ಯಾರು ಸತತವಾಗಿ **ಆತನ** ಚಿಂತನೆ ಮಾಡುತ್ತಾನೋ, ಅತನ ಮೇಲೆ ನಿರ್ಭರನಾಗಿರು ವನೋ, ನಿರಭಿಮಾನಿಯೋ, ಪವಿತ್ರನೋ, ನಿಃಸ್ವಾರ್ಥಿಯೋ ಅವನೇ ಸಾಧು. 'ನಾಹಂ ನಾಹಂ, ತುಹೂ ತುಹೂ.' (ನಾನಲ್ಲ, ನೀನು). ನಾವೇನಾದರೂ ಮಾಡುತ್ತಿದ್ದೇವೆಯೇನು? ನಮ್ಮಿಂದೇನಾದರೂ ಮಾಡಲು ಸಾಧ್ಯವೇನು? ಯಾರು ಇಲ್ಲಿ (ಹೃದಯವನ್ನು ತೋರುತ್ತ) ನೆಲೆಸಿರುವನೋ ಆತನೇ ಮಾಡಿಸುತ್ತಿದ್ದಾನೆ. ಆತನ ಇಚ್ಛೆಯಿಂದಲೇ ಎಲ್ಲವೂ ನಡೆಯು ತ್ತಿದೆ. ನಿಜವಾಗಿಯೂ ಹೇಳುತ್ತಿದ್ದೇನೆ – ಆ ಅನುಭವ ನನ ಗಾಗುತ್ತಿದೆ – ಜೀವನದ ಹೆಜ್ಜೆಹೆಜ್ಜೆಗೂ. ಆತನ ಇಚ್ಛೆ ಹಾಗೂ ಆತನ ಕೃಪೆಯಿಲ್ಲದಿದ್ದರೆ ಯಾರಿಂದೇನು ಮಾಡಲು ಸಾಧ್ಯ? ಪ್ರಭು, 'ನಾನಲ್ಲ, ನೀನು' ('ನಾಹಂ ನಾಹಂ, ತುಹೂ ತುಹೂ') ಇವು ಶ್ರೀರಾಮಕೃಷ್ಣರೇ ಉಚ್ಚರಿಸಿದ ಮಾತುಗಳು. ಇವೇ ಮಹಾವಾಕ್ಯಗಳು. ಅವನ್ನು ಜಪಿಸಿದರೆ ಸಿದ್ಧಿ ಪ್ರಾಪ್ತಿಯಾಗುತ್ತದೆ.

ಬೆಳಗ್ಗೆ ಬಾಬಾ ಈಸಿಚೇರ್‌ನಲ್ಲಿ ಕುಳಿತಿದ್ದಾರೆ. ಭಕ್ತನು ಹತ್ತಿರ ಕುಳಿತಿದ್ದಾನೆ. ದೂರದಲ್ಲಿ ಆಶ್ರಮದ ಚಿಕ್ಕ ಚಿಕ್ಕ ಹುಡುಗರು ಓದುತ್ತಿದ್ದಾರೆ. ಬಾಬಾ ಹೇಳಿದರು, "ನೋಡು, ತ್ಯಾಗವನ್ನು ಮಾಡಲೇಬೇಕು. ಕಾಮಕಾಂಚನ ತ್ಯಾಗ. ಆಮೇಲೆ ಮನಸ್ಸಿನ ಎಲ್ಲ ಸೂಕ್ಷ್ಮ ವಾಸನೆಗಳನ್ನೂ ತ್ಯಜಿಸಬೇಕು. ಹೆಸರು, ಕೀರ್ತಿಯ ಆಸೆ ಎಲ್ಲವೂ ಅವುಗಳಿಂದಲೇ ಬೆಳೆಯುವುದು. ಇನ್ನೂ ಎಷ್ಟೆಷ್ಟೋ ಆಸೆಗಳಿವೆ – ಅವೆಲ್ಲ ವನ್ನೂ ತ್ಯಜಿಸಬೇಕು. ತ್ಯಾಗಕ್ಕೆ ಎಲ್ಲೆಯಿಲ್ಲ, ಅಂತೆಯೇ ಆನಂದಕ್ಕೂ ಎಲ್ಲೆಯಿಲ್ಲ. ತ್ಯಾಗದಿಂದಲೇ ಆನಂದ. ತ್ಯಾಗಕ್ಕೆ ತಕ್ಕ ಆನಂದ, ಆದರ್ಶವಿರಬೇಕು. ತ್ಯಾಗದ ಆದರ್ಶ ಯಾವಾಗ, ಎಲ್ಲಿ, ಹೇಗೆ ಬೇಕೋ ಅದನ್ನು ತೋರಿಸಿಕೊಡಲು ಆತನು ಬರುವನು. ತ್ಯಾಗವೇ ಮನುಷ್ಯತ್ವ – ದೇವತ್ವಕ್ಕಿಂತಲೂ ಹಿರಿದು. ದೇವತೆಗಳೂ ಮನುಷ್ಯನ ತ್ಯಾಗದ ಅಪೇಕ್ಷಿಗಳು – ದಧೀಚಿಯ ತ್ಯಾಗದಂತೆ. ಅವತಾರಪುರುಷರದು ಪರಿಪೂರ್ಣ ಆದರ್ಶ. ಅವರಿಂದ ಯಾರೆಷ್ಟು ತೆಗೆದುಕೊಳ್ಳಬಲ್ಲರೋ ಅವರಿಗೆ ಅಷ್ಟೇ ಸಿಗುವುದು. ಅನಂತ ಅಗಾಧ ಸಮುದ್ರವಿದೆ; ಚಿಕ್ಕದೊಂದು ಘಟದಿಂದ ಯಾರೆಷ್ಟು ನೀರನ್ನು ತುಂಬಿಕೊಳ್ಳುವರೋ ಅಷ್ಟು ತುಂಬುವುದು. ಘಟ ಮುಳುಗಲಿ – ಮುಳುಗಿಹೋಗಲಿ ಬಿಡು! ತ್ಯಾಗ ಆವಶ್ಯಕ. ಒಳ್ಳೆಯದು ಸಿಗಬೇಕಾದರೆ ಕೆಟ್ಟದ್ದನ್ನು ಬಿಡಬೇಕು – ಕೆಟ್ಟದ್ದು ಬೇಕಾದರೆ ಒಳಿತನ್ನು ಬಿಡಬೇಕು.

**ಸುಖಾರ್ಥೀ ನ ಲಭೇತ್ ವಿದ್ಯಾಂ**
**ವಿದ್ಯಾರ್ಥೀ ನ ಲಭೇತ್ ಸುಖಮ್।**
**ಸುಖಾರ್ಥೀ ವಾ ತ್ಯಜೇತ್ ವಿದ್ಯಾಂ**
**ವಿದ್ಯಾರ್ಥೀ ವಾ ತ್ಯಜೇತ್ ಸುಖಮ್ ॥**

"ಸುಖಭೋಗಗಳ ಆಸೆಯಿದ್ದರೆ ಏನೂ ಲಭಿಸದು. ವಿಚಾರ ಮಾಡು – ಸಂಸಾರದಲ್ಲಿ ನಿಜವಾದ ಸುಖವಿಲ್ಲ. ಸುಖದ ನಂತರವೇ ದುಃಖ. ಜನ್ಮಜನ್ಮಾಂತರಗಳಿಂದ ಇದೇ ನಡೆಯುತ್ತಿದೆ. ಇದು ಇನ್ನು ಸಾಕು. ಈಗ unalloyed (ಪರಿಶುದ್ಧ) ಸುಖವನ್ನರಸಿ ಹೋಗಬೇಕು – ಕಲಬೆರಕೆ ಇಲ್ಲದ ಸುಖ. ಕಲಬೆರಕೆ ಪದಾರ್ಥಗಳನ್ನು ತಿಂದು ಶುದ್ಧವಾದ ವಸ್ತುವಿನ ರುಚಿಯೇ ಮರೆತುಹೋಗಿದೆ, ಮತ್ತು ಅದನ್ನು ಜೀರ್ಣಿಸಿಕೊಳ್ಳುವ ಶಕ್ತಿಯೂ ಕಳೆದುಹೋಗಿದೆ. ಈಗೀಗ ಕಡಿಮೆಬೆಲೆಗೆ ಕಲಬೆರಕೆಯಾದ ವಸ್ತುಗಳು ಸಿಗುತ್ತವೆ ಎಂದು ಶುದ್ಧವಾದುದು ಯಾರಿಗೂ ಬೇಕಿಲ್ಲ."

ಸಂಧ್ಯಾರತಿಯ ನಂತರ, ಹೊರಗಿನ ಹಾಲ್‌ನಲ್ಲಿ ನಾಲ್ಕಾರು ಮಂದಿ ಭಕ್ತರು ಇದ್ದಾರೆ. ಬಹಳ ಹೊತ್ತು ಮೌನದ ನಂತರ ಬಾಬಾ ತಮ್ಮಷ್ಟಕ್ಕೆ ಸಹಜ ಸ್ವರದಲ್ಲಿ ಹಾಡಿಕೊಳ್ಳುತ್ತಿದ್ದಾರೆ:

**ಮಾ, ತೋರ್ ಕೋಲೆ ಆಮಿ ಲುಕಿಯೇ ಥಾಕಿ**
**ಥೇಕೆ ಥೇಕೆ ಚೇಯೆ ಚೇಯೆ,**
**ಚೇಯೆ ಚೇಯೆ ತೋರ್ ಮುಖಪಾನೆ**
**ಶುಧು ಮಾ, ಮಾ, ಮಾ, ಮಾ, ಬೊಲೆ ಡಾಕಿ ।**
**ಓ ಮಾ ತೋರ್ ಕೋಲೆ ಆಮಿ ಲುಕಿಯೇ ಥಾಕಿ ॥...**

*(ನಿನ್ನೊಲವಿನ ಮಡಿಲೊಳಡಗಿ, ನಿನ್ನೆಡೆಗೇ ಕಣ್ಣ ಚಾಚಿ, ಓ ತಾಯಿ – ಎನ್ನುವೆ)*

" – ಚಿಕ್ಕ ಮಗುವೊಂದು ತಾಯಿಯ ಮಡಿಲಿನಲ್ಲಿದೆ, ತಾಯಿಯನ್ನೇ ನೋಡುತ್ತಿದೆ. ಬಹಳ ಆನಂದದಿಂದ ತಾಯಿ ಯಲ್ಲೇ ಒಂದಾಗಿ ಬಿಡೋಣವೆಂಬ ಆಸೆ; ಯಾರಿಗೂ ಕಾಣಿಸ ಬಾರದು. ತಾಯಿ ಹಾಗು ನಾನು ಮಾತ್ರ – ಇನ್ನಾರೂ ಇಲ್ಲ. ಮತ್ತೆ ಮತ್ತೆ, ಆಗಾಗ ತಾಯಿಯನ್ನು ನೋಡುತ್ತ ಆನಂದದ ಮಿತಿ ಮೀರಿದಾಗ ಅದನ್ನು ತಡೆಹಿಡಿಯಲೂ ಸಾಧ್ಯವಿಲ್ಲ – ಆಗ 'ಅಮ್ಮಾ, ಅಮ್ಮಾ ಎಂದು ಕರೆಯುವೆ'. ತಾಯಿಯ ಬಳಿ, ತಾಯಿಯ ಮಡಿಲಿನಲ್ಲೇ ಮಗುವಿದೆ, ಕರೆಯುವುದೇನೂ ಬೇಕಿಲ್ಲ, ಆದರೂ ಕಾರಣವಿಲ್ಲದ ಆನಂದದಿಂದ ಕಾರಣವಿಲ್ಲದೆ ಕರೆಯುತ್ತಿದೆ. ಅದಾದ ಮೇಲೆ ಇನ್ನೂ ಅದೇನೂ ಇದೆ – 'ಯೋಗಾನಂದ ನಿದ್ರಾರಸ' ಅವೆಲ್ಲ ಏಕೆ? ಚಿಕ್ಕ ಮಗುವೊಂದು ಮಡಿಲಲ್ಲಿ ಇದೆ. ಅದರ ನಡುವೆ 'ಯೋಗಾನಂದ ನಿದ್ರಾರಸ' ಎಂದು ಏಕಾದರೂ ಸೇರಿಸಿದ್ದಾರೋ! ನಾವೆಲ್ಲ ಅದೇ ಎರಡು ಸಾಲುಗಳನ್ನೇ ಹಾಡುತ್ತಿದ್ದೆವು – ಒಂದು ಘಂಟೆ ಎರಡು ಘಂಟೆಗಳ ಕಾಲ. ಎಲ್ಲರೂ ತಲ್ಲೀನರಾಗಿ ಬಿಡುತ್ತಿದ್ದೆವು. ಆಗ ಅವರು (ಶ್ರೀರಾಮಕೃಷ್ಣರು) ನಗುತ್ತಿದ್ದರು, ಇಲ್ಲವೆ ಹಾಡಿನಲ್ಲಿ ಸೇರುತ್ತಿದ್ದರು. ಅದೆಂಥ ಆನಂದ!

**"ಮಾ ತೋರ್ ಕೋಲೇ ಆಮಿ ಲುಕಿಯೆ ಥಾಕಿ**
**-- ಮಾ ಮಾ ಮಾ ಮಾ ಬೋಲೆ ಡಾಕಿ॥"**

(ನಿನ್ನೊಲವಿನ ಮಡಿಲೊಳಡಗಿ, ನಿನ್ನೆಡಗೇ ಕಣ್ಣ ಚಾಚಿ ಓ ತಾಯಿ – ಎನ್ನುವೆ)

ಮಾರನೆಯ ದಿನ ಬೆಳಗ್ಗೆ ಬಾಬಾ ಒಂದು ಬಿಳಿಯ ರೇಶ್ಮೆಯ ಚದ್ದರನ್ನು (ಶಾಲು) ಹೊದ್ದಿದ್ದಾರೆ. ಎರಡೂ ಕೈಗಳನ್ನು ಜೋಡಿಸಿ ಬಾಬಾ ತಮ್ಮಲ್ಲಿಯೇ ಸ್ತೋತ್ರಪಠಣ ಮಾಡುತ್ತಿದ್ದಾರೆ. ಭಕ್ತರು ಅದಕ್ಕೆ ತೊಂದರೆಯನ್ನುಂಟುಮಾಡದೆ ಹೊರಗಡೆಯಿಂದಲೆ ನೋಡುತ್ತಲೂ, ಕೇಳುತ್ತಲೂ ಇದ್ದಾರೆ – ಪ್ರಮದದಾಸ ಮಿತ್ರ ಮಹಾಶಯರ 'ವಿಶುದ್ಧ ವಿಜ್ಞಾನಮಗಾಧಸೌಖ್ಯಂ' ಇತ್ಯಾದಿ. ಅದು ಶ್ರೀರಾಮಕೃಷ್ಣ ಸ್ತವ. ಪ್ರತಿಯೊಂದು ಶ್ಲೋಕದ ಕೊನೆಯಲ್ಲಿ 'ಭುವಿ ರಾಮಕೃಷ್ಣ' ಎನ್ನುವಾಗ ಬಾಬಾ ತಮ್ಮ ಜೋಡಿಸಿದ ಕರಗಳನ್ನು ಹಣೆಗೊತ್ತಿಕೊಳ್ಳುತ್ತಿದ್ದಾರೆ. ಗುರುಗಂಭೀರ ಕಂಠದಿಂದ ಗದ್ಗದ ಸ್ವರದಲ್ಲಿ ಹ್ರಸ್ವ – ದೀರ್ಘ ಮಾತ್ರೆಗಳನ್ನು ಸರಿಯಾಗಿ ಉಚ್ಚರಿಸುತ್ತ ಬಾಬಾ ಏಕಾಗ್ರಚಿತ್ತದಿಂದ ಸ್ತವವನ್ನು ಪಠಿಸುತ್ತಿದ್ದಾರೆ –

**'ತಮದ್ಭುತಂ ಕಂಚಿದಚಿಂತ್ಯಶಕ್ತಿಂ ।**
**ವಂದೇ ಪ್ರಶಾಂತಂ ಪರಿಪೂರ್ಣ ಬೋಧಂ**
**ಜ್ಞಾನಸ್ಯ ಭಕ್ತೇಶ್ಚ ವಿಶುದ್ಧಮೂರ್ತಿಂ**
**ದ್ವಿಮೂರ್ತಿಮೇಕಂ ಭುವಿ ರಾಮಕೃಷ್ಣಮ್ ।**
**ದ್ವಿಮೂರ್ತಿಮೇಕಂ ಭುವಿ ರಾಮಕೃಷ್ಣಮ್ ॥'**

ಎನ್ನುತ್ತ ಮತ್ತೆ ಮತ್ತೆ ಕೈಗಳನ್ನು ಹಣೆಗೊತ್ತಿಕೊಂಡು ಪ್ರಣಾಮ ಮಾಡತೊಡಗಿದರು. *(ಮುಂದುವರಿಯುವುದು)*

ಸ್ವಾಮಿ ನಿತ್ಯಸ್ಥಾನಂದ

# ಭಗವದ್ ವಿಭೂತಿ




ವಿಭೂತಿಯೋಗವು ಭಗವದ್ಗೀತೆಯ ಏಳನೆಯ ಅಧ್ಯಾಯದಿಂದಲೇ ಪ್ರಾರಂಭವಾಗುತ್ತದೆ ಎಂದು ಹೇಳಬಹುದು. ಆ ಅಧ್ಯಾಯದ ಎಂಟನೇ ಶ್ಲೋಕದಿಂದ ಹನ್ನೊಂದನೇ ಶ್ಲೋಕದವರೆಗೆ ಶ್ರೀಕೃಷ್ಣನು ತಾನು ಏನೇನಾಗಿರುವೆನೆಂಬುದನ್ನು ವಿವರಿಸುತ್ತಾನೆ. ಈ ಮೇಲಿನ ಶ್ಲೋಕಗಳಲ್ಲಿ ಎಲ್ಲದರ ಸಾರಭೂತ ಅಂಶವೇ ತಾನು ಎಂಬುದನ್ನು ಒತ್ತಿ ಹೇಳುತ್ತಾನೆ. ಪಂಚಭೂತಗಳಲ್ಲಿ ಅವುಗಳ ಗುಣಸ್ವರೂಪವಾಗಿ – ಅಂದರೆ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳಾಗಿ – ನೆಲೆಸಿರುವವನು ಭಗವಂತನೇ. ಇವುಗಳ ಪುಣ್ಯರೂಪಗಳು ತಾನೆಂದು ಅವನು ಹೇಳುತ್ತಾನೆ. ಇವು ಸ್ವಭಾವತಃ ಪುಣ್ಯವಾಗಿಯೇ ಇರುತ್ತವೆ, ಆದರೆ ಪ್ರಾಣಿಗಳ ಸಂಸ್ಪರ್ಶದಿಂದ ಕಲುಷಿತವಾಗುತ್ತವೆ. ಇವು ಸೂಕ್ಷ್ಮತನ್ಮಾತ್ರಗಳು, ಮತ್ತು ಇವುಗಳೇ ಸ್ಥೂಲಭೂತಗಳಾಗಿ ಪರಿವರ್ತನೆಗೊಳ್ಳುತ್ತವೆ. ಆದ್ದರಿಂದ ಇವು ಪಂಚಭೂತಗಳ ಸಾರ. ಮನುಷ್ಯರ ಮನುಷ್ಯತ್ವವೂ, ವೇದಗಳ ಸಾರಭೂತವಾದ ಪ್ರಣವವೂ, ಎಲ್ಲ ಪ್ರಾಣಿಗಳ ಜೀವಸತ್ವವೂ, ತಪಸ್ವಿಗಳ ತಪಶ್ಶಕ್ತಿಯೂ, ಬುದ್ಧಿಶಾಲಿಗಳ ಬುದ್ಧಿಶಕ್ತಿಯೂ, ವರ್ಚಸ್ವಿಗಳ ವರ್ಚಸ್ಸೂ, ಬಲಶಾಲಿಗಳ ಬಲವೂ ತಾನೆಂದು ಶ್ರೀಕೃಷ್ಣನು ಹೇಳುತ್ತಾನೆ. ಧರ್ಮಕ್ಕೆ ಅವಿರುದ್ಧವಾದ ಆಸೆಯೂ ತಾನೆಂದು ಅವನು ಹೇಳುತ್ತಾನೆ. ಏಕೆಂದರೆ ಜಗತ್ತನ್ನು ನಡೆಸುತ್ತಿರುವುದೇ ಈ ಆಸೆಗಳು. ಒಟ್ಟಿನಲ್ಲಿ ಹೇಳಬೇಕೆಂದರೆ ಎಲ್ಲ ವ್ಯಕ್ತಿ ವಿಷಯಗಳ ಹಿಂದೆ ಅವ್ಯಕ್ತ ಸೂಕ್ಷ್ಮಶಕ್ತಿಯಾಗಿ ಕೆಲಸ ಮಾಡುತ್ತಿರುವವನೇ ಭಗವಂತ. ಎಲ್ಲರ ಹಿಂದೆಯೂ ಭಗವತ್ ಶಕ್ತಿಯನ್ನು ಕಾಣಬೇಕೆಂಬುದು ವಿಭೂತಿಯೋಗದ ಅರ್ಥ.

ಒಮ್ಮೆ ಸ್ವಾಮಿ ಅದ್ಭುತಾನಂದರಿಗೂ ಮತ್ತು ಸ್ವಾಮಿ ತುರೀಯಾನಂದರಿಗೂ ಚರ್ಚೆ ನಡೆಯುತ್ತದೆ. ಭಗವಂತನಲ್ಲಿ ವೈಷಮ್ಯ ನೈರ್ಘೃಣ್ಯಗಳಿಲ್ಲವೆಂದು ತುರೀಯಾನಂದರು ವಾದಿಸುತ್ತಾರೆ. ಭಗವಂತನಲ್ಲಿ ಪಕ್ಷಪಾತ (ವೈಷಮ್ಯ) ಇಲ್ಲ, ಪ್ರಾಣಿಗಳು ಅವರವರ ಕರ್ಮಾನುಸಾರವಾಗಿ ಸುಖದುಃಖಾದಿಗಳನ್ನು ಅನುಭವಿಸುತ್ತವೆ, ಅದಕ್ಕೆ ಭಗವಂತನು ಜವಾಬ್ದಾರನಲ್ಲ. ಹೀಗೆ ಜೀವಿಗಳು ದುಃಖವನ್ನು ಅನುಭವಿಸಿದರೆ ಭಗವಂತನು ಕ್ರೂರಿ (ನೈರ್ಘೃಣ್ಯ) ಎಂದೂ ಹೇಳಲಾಗುವುದಿಲ್ಲ. ಸ್ವಾಮಿ ಅದ್ಭುತಾನಂದರು ಇದಕ್ಕೆ ಹೇಳುತ್ತಾರೆ : "ನೀನು ಭಗವಂತನನ್ನು ಮಗುವಿನಂತೆ ರಕ್ಷಿಸುತ್ತಿರುವೆ. ಅವನನ್ನು ಈ ರೀತಿ ರಕ್ಷಿಸುವ ಆವಶ್ಯಕತೆ ಏನಿದೆ?" ಸ್ವಾಮಿ ತುರಿಯಾನಂದರು ಕೇಳುತ್ತಾರೆ: "ಹಾಗಾದರೆ ಭಗವಂತನು ರಷ್ಯಾದ ಝಾರ್ ದೊರೆಗಳಂತೆ ಅತ್ಯಂತ ಕ್ರೂರಿಯೆ?" ಸ್ವಾಮಿ ಅದ್ಭುತಾನಂದರು ಉತ್ತರಿಸುತ್ತಾರೆ: "ಆದರೆ ಝಾರ್ ದೊರೆಗಳ ಹಿಂದೆ ಕೆಲಸ ಮಾಡುತ್ತಿರುವುದೂ ಭಗವತ್ ಶಕ್ತಿಯೇ ಎಂಬುದನ್ನು ನಾವು ಮರೆಯಬಾರದು."

ಶ್ರೀರಾಮಕೃಷ್ಣರ ಜೀವನದಲ್ಲಿ ಒಂದು ಅರ್ಥಪೂರ್ಣವಾದ ಘಟನೆ ಬರುತ್ತದೆ. ಮಹಾ ಮೇಧಾವಿ ಪಂಡಿತನೂ, ಆದರೆ ನಾಸ್ತಿಕನೂ ಆದ ವ್ಯಕ್ತಿಯೊಬ್ಬನು ಶ್ರೀರಾಮಕೃಷ್ಣರ ಬಳಿಗೆ ಬರುತ್ತಾನೆ. ಶ್ರೀರಾಮಕೃಷ್ಣರು ಮಹಾ ಅನುಭಾವಿಗಳೆಂದು ಅವನು ಕೇಳಿದ್ದ. ಅವರನ್ನು ವಾದದಲ್ಲಿ ಸೋಲಿಸಿ, ಭಗವಂತನಿಲ್ಲ ಎಂದು ಅವರನ್ನು ಭ್ರಮನಿರಸನಗೊಳಿಸಬೇಕೆಂಬುದು ಅವನ ಉದ್ದೇಶವಾಗಿತ್ತು. ಅವನು ಶ್ರೀರಾಮಕೃಷ್ಣರನ್ನು ವಾದಕ್ಕೆ ಕರೆಯುತ್ತಾನೆ. ಶ್ರೀರಾಮಕೃಷ್ಣರು ಏನು ವಾದಮಾಡಬಲ್ಲರು? ಅವರು ಬಹುಶ್ರುತರೂ ಅಲ್ಲ, ಪಂಡಿತರೂ ಅಲ್ಲ, ಅನಕ್ಷರಸ್ಥರೆಂದೇ ಹೇಳಬೇಕು. ಆದರೂ ಶ್ರೀರಾಮಕೃಷ್ಣರು ಸವಾಲನ್ನು ಸ್ವೀಕರಿಸುತ್ತಾರೆ. ಏಕೆಂದರೆ ಅವರಿಗೆ ವಿದ್ವದ್‌ಬಲವಿಲ್ಲದಿದ್ದರೂ ಅನುಭವದ ಬಲವಿತ್ತು. ವಾದ ಪ್ರಾರಂಭವಾಯಿತು. ಪಂಡಿತನು ಪುಂಖಾನುಪುಂಖವಾಗಿ ಶಾಸ್ತ್ರವಾಕ್ಯಗಳನ್ನು ಉದ್ಧರಿಸುತ್ತ ತನ್ನ ಪರಮಾದ್ಭುತ ವಾಕ್ಚಾತುರ್ಯ ಪ್ರದರ್ಶಿಸತೊಡಗಿದನು. ಶ್ರೀರಾಮಕೃಷ್ಣರು ಕೇಳುತ್ತ ಕೇಳುತ್ತ ಭಗವದ್ಭಾವದಲ್ಲಿ ತಲ್ಲೀನರಾಗಿ, ಅವರಿಗೆ ಭಾವಸಮಾಧಿ ಉಂಟಾಯಿತು. ಆ ಸಮಾಧಿಯಿಂದ ಕೆಳಗಿಳಿದ ಮೇಲೆ ಹೇಳಿದರು: "ನಿನ್ನ ಆ ವಾಕ್ಪ್ರತಿಭೆಯಲ್ಲಿ ಭಗವತ್ ಶಕ್ತಿಯ ಆವಿರ್ಭಾವವನ್ನು ಅನುಭವಿಸಿದೆ." ಶ್ರೀರಾಮಕೃಷ್ಣರ ಪಾಲಿಗೆ ಇದೂ ಒಂದು ಭಗವದ್ ವಿಭೂತಿಯೇ.

ಇಲ್ಲಿ ಸ್ವಾಮಿ ವಿವೇಕಾನಂದರ ಈ ಕೆಳಗಿನ ಮಾತನ್ನು ನೆನಪಿಸಿಕೊಳ್ಳಬಹುದು: "ಪ್ರಪಂಚದಲ್ಲಿ ಒಳ್ಳೆಯದರಂತೆ ವ್ಯಕ್ತವಾಗುತ್ತಿರಲಿ, ಕೆಟ್ಟದ್ದರಂತೆ ವ್ಯಕ್ತವಾಗುತ್ತಿರಲಿ, ಇರುವುದು ಒಂದೇ ಶಕ್ತಿ. ದೇವರು ಮತ್ತು ಸೈತಾನ ಇಬ್ಬರೂ ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಹರಿಯುತ್ತಿರುವ ಒಂದೇ ನದಿ." (*ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ. ೧, ಪು.೨೭೧*).

ಶ್ರೀರಾಮಕೃಷ್ಣರು ಒಂದು ಉದಾಹರಣೆಯ ಮೂಲಕ ವಿವರಿಸುತ್ತಾರೆ: ಮಾಡಿನ ಮೇಲೆ ಬೀಳುವ ಮಳೆನೀರು ಸಿಂಹ, ಹುಲಿ, ಎತ್ತು ಮುಂತಾದ ಪ್ರಾಣಿಗಳ ಮುಖಾಕೃತಿಯ ಮೂಲಕ ಕೆಳಗೆ ಬೀಳುವಂತೆ ವ್ಯವಸ್ಥೆ ಮಾಡಿರುತ್ತಾರೆ. ಚಿಕ್ಕಮಕ್ಕಳು ಸಿಂಹವು ನೀರನ್ನು ಉಗುಳುತ್ತಿದೆ ಎಂದು ಮುಂತಾಗಿ ಮಾತನಾಡಿಕೊಳ್ಳುತ್ತಾರೆ. ಎಲ್ಲ ಮುಖಗಳ ಮೂಲಕ ಬರುತ್ತಿರುವುದು

ಒಂದೇ ನೀರು. ವೀರಪ್ಪನ್ ಮೂಲಕ ವ್ಯಕ್ತವಾಗುತ್ತಿದ್ದುದೂ ಅದೇ ಭಗವತ್ ಶಕ್ತಿಯೇ. ಶ್ರೀರಾಮಕೃಷ್ಣರು ಹೇಳುವಂತೆ, ಎಲ್ಲರಲ್ಲಿಯೂ ಭಗವಂತನು ಸಮಾನವಾಗಿ ನೆಲೆಸಿರುತ್ತಾನೆ, ಆದರೆ ಶಕ್ತಿ ವಿಶೇಷವಿರುತ್ತದೆ. ಒಬ್ಬೊಬ್ಬರಲ್ಲಿ ಒಂದೊಂದು ಶಕ್ತಿವಿಶೇಷವಾಗಿ ಭಗವಂತನು ಪ್ರಕಾಶಿಸುತ್ತಾನೆ. ಈ ಶಕ್ತಿವಿಶೇಷವನ್ನೇ ವಿಭೂತಿ ಎಂದು ಕರೆಯುವುದು.

ಒಂಬತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಇನ್ನೂ ಮುಂದುವರಿದು ತನ್ನ ಅತಿಸೂಕ್ಷ್ಮ ವಿಭೂತಿ ರೂಪಗಳನ್ನು ವಿವರಿಸುತ್ತಾನೆ (೧೬-೧೯). ತಾನೇ ಜಗತ್ತಿನ ತಂದೆ ಮತ್ತು ತಾಯಿ ಎಂದು ಹೇಳುತ್ತಾನೆ. ತಂದೆ ಎಂದರೆ ಭಗವಂತನೆ; ಜಗತ್ತಿನ ಉತ್ಪತ್ತಿಗೆ ಕಾರಣ ಎಂದರ್ಥ. ತಾಯಿ ಎಂದರೆ ಪೋಷಕನೂ ಅವನೇ ಎಂದರ್ಥ. ಅವನೇ ಪವಿತ್ರ ಓಂಕಾರ. ಈ ಓಂಕಾರವೇ ಸೃಷ್ಟಿಯ ಮೂಲಸ್ಪಂದನ. ಪರಮಾತ್ಮನಲ್ಲಿ ಸೃಷ್ಟಿ ಸಂಕಲ್ಪ ಉಂಟಾಗುತ್ತದೆ – ಅವನಿಂದ ಅವಿಭಾಜ್ಯವಾದ ಶಕ್ತಿಯ ಪ್ರಭಾವವಾದ ಈ ಸಂಕಲ್ಪವೇ ಸೃಷ್ಟಿಯ ಪ್ರಥಮ ಸ್ಪಂದನ. ಓಂಕಾರ ಧ್ವನಿಯು ಈ ಸ್ಪಂದನವನ್ನು ಪ್ರತಿನಿಧಿಸುತ್ತದೆ. ಸೃಷ್ಟಿಯ ಇದರ ಮುಂದಿನ ಹಂತ ವೈವಿಧ್ಯಮಯ ಪ್ರಪಂಚದ ಶಬ್ದರೂಪ. ಓಂಕಾರವೆಂಬ ಬೀಜರೂಪವು ಶಬ್ದರೂಪವಾಗಿ ಅಂಕುರಿಸುತ್ತದೆ. ಇಲ್ಲಿ ಶಬ್ದವೆಂದರೆ ವಸ್ತುಗಳ ಅಮೂರ್ತ ಭಾವನಾರೂಪ. ಉದಾಹರಣೆಗೆ, ಕಾಣುವ ಮನುಷ್ಯರೆಲ್ಲರೂ ಮೂರ್ತರೂಪ. ಎಲ್ಲ ಮನುಷ್ಯರನ್ನೂ ಒಳಗೊಳುವ 'ಮನುಷ್ಯ' ಎಂಬ ಭಾವನೆ (idea) ಮನಸ್ಸಿನಲ್ಲಿರುತ್ತದೆ. ಇದನ್ನೇ ಶಬ್ದ ಎಂದು ಕರೆಯುವುದು. ಹೀಗೆ ಜಗತ್ತಿನ ಎಲ್ಲ ವಿಷಯಗಳಿಗೂ ಸಂಬಂಧಿಸಿದ ಅಮೂರ್ತ ಭಾವನೆಗಳ ಒಟ್ಟು ಮೊತ್ತವೇ ವೇದಗಳು. ಈ ವೇದಗಳೇ ತಾನೆಂದು ಶ್ರೀಕೃಷ್ಣ ಹೇಳುತ್ತಾನೆ. ವೇದಗಳೆಂದರೆ ಪುಸ್ತಕಗಳಲ್ಲ. ಈ ವೇದಗಳು ವಿಶ್ವಮನಸ್ಸಿನಲ್ಲಿ ಇರುತ್ತವೆ ಮತ್ತು ಅವೇ ಸ್ಥೂಲ ಜಗತ್ತಾಗಿ ವ್ಯಕ್ತವಾಗುತ್ತವೆ. ಆದ್ದರಿಂದಲೇ ವೇದಶಬ್ದಗಳ ಮೂಲಕವೇ ಇಡೀ ಜಗತ್ತು ಸೃಷ್ಟಿಸಲ್ಪಟ್ಟಿದೆ ಎಂದು ಹೇಳಲಾಗಿದೆ (**ಯೋ ವೇದೇಭ್ಯೋ ಅಖಿಲಂ ಜಗತ್ ನಿರ್ಮಮೇ**). ಇದು ಸಾಯಣಾಚಾರ್ಯರ ಅಭಿಪ್ರಾಯವೆಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ.

ಸೃಷ್ಟಿಸಂಕಲ್ಪದಿಂದ ಹಿಡಿದು ಸ್ಥೂಲ ಜಗತ್ತಿನವರೆಗೆ ಎಲ್ಲವೂ ಭಗವಂತನ ಅಭಿವ್ಯಕ್ತಿಯೇ, ಎಲ್ಲವೂ ಅವನ ವಿಭೂತಿಯೇ. ಮೊದಲು ಓಂಕಾರವೆಂಬ ಬೀಜೋತ್ಪತ್ತಿಯಾಗುತ್ತದೆ, ಅದು ಶಬ್ದ ರೂಪದಲ್ಲಿ ಅಂಕುರಿಸುತ್ತದೆ, ಅದೇ ಮುಂದೆ ಸ್ಥೂಲ ಜಗತ್ತೆಂಬ ಶಾಖೋಪಶಾಖೆಗಳಾಗಿ ಅಭಿವ್ಯಕ್ತವಾಗುತ್ತದೆ. ಸಂಗೀತದ ಉದಾಹರಣೆಯ ಮೂಲಕ ವಿವರಿಸುವುದಾದರೆ, ಮೊದಲು ಮೂಲಧ್ವನಿ – ಇದನ್ನು ಓಂಕಾರಕ್ಕೆ ಹೋಲಿಸಬಹುದು. ಇದು ಸಪ್ತಸ್ವರಗಳಾಗಿ ವ್ಯಕ್ತವಾಗುತ್ತದೆ – ಶಬ್ದದ ಹಂತ. ಈ ಸ್ವರಗಳು ಅನೇಕಾನೇಕ ರಾಗರಾಗಿಣಿಗಳಾಗಿ ವ್ಯಕ್ತವಾಗುತ್ತವೆ – ಇದನ್ನು ಸ್ಥೂಲ ಜಗತ್ತಿಗೆ ಹೋಲಿಸಬಹುದು.

ಏಳನೆಯ ಅಧ್ಯಾಯದಲ್ಲಿ ಸ್ಥೂಲ ಜಗತ್ತಿನ ಸೂಕ್ಷ್ಮ ರೂಪವು ತಾನೆಂದು ಶ್ರೀಕೃಷ್ಣನು ಹೇಳುತ್ತಾನೆ. ಹತ್ತನೆಯ ಅಧ್ಯಾಯದಲ್ಲಿ ಸ್ಥೂಲ ಜಗತ್ತಿನಲ್ಲಿಯೇ ತನ್ನ ವಿಶೇಷ ಆವಿರ್ಭಾವಗಳು ಯಾವುವೆಂಬುದನ್ನು ಹೇಳುತ್ತಾನೆ. ನಾವು ಪ್ರಪಂಚದಲ್ಲಿರುವಾಗ, ದಿನನಿತ್ಯ ಪ್ರಪಂಚದ ವಿವಿಧ ವಸ್ತುಗಳು ವ್ಯಕ್ತಿಗಳೊಡನೆ ವ್ಯವಹರಿಸುತ್ತಿರುವಾಗ ಭಗವಂತನನ್ನು ಮರೆಯುವುದು ಸ್ವಾಭಾವಿಕ. ಪ್ರಪಂಚವೇ ನಮಗೆ ಆಗಾಗ ಭಗವಂತನನ್ನು ನೆನೆಸಿಕೊಡುವಂತಾದರೆ! ಪ್ರಪಂಚದಲ್ಲಿ ಕಾಣುವ ಶಕ್ತಿವಿಶೇಷಗಳಲ್ಲಿ ನಾವು ಭಗವಂತನನ್ನು ಕಾಣುವಂತಾಗಬೇಕು ಎಂಬುದನ್ನು ವಿಭೂತಿಯೋಗವು ಸೂಚಿಸುತ್ತದೆ. ಆಗ ಸದಾ ಭಗವಂತನ ಸ್ಮರಣೆಯಲ್ಲಿರಲು ಸಾಧ್ಯವಾಗುತ್ತದೆ. ಉದಾಹರಣೆಗೆ, ಒಂದು ಸುಂದರವಾದ ಹೂವನ್ನು ನೋಡಿದಾಗ 'ಭಗವಂತನ ಸೃಷ್ಟಿ ಎಂಥ ಚಮತ್ಕಾರ' ಎಂದು ದೇವರನ್ನು ನೆನೆಯುವಂತಾಗಬೇಕು. ಕೇವಲ ಪ್ರಪಂಚದಿಂದ ದೂರವಾಗುವುದರಿಂದ ಭಗವಂತನನ್ನು ನೆನೆಯಬಹುದು ಎಂಬುದಕ್ಕೆ ಯಾವ ಭರವಸೆಯೂ ಇಲ್ಲ. ಸರ್ಪ ಮಿಥ್ಯೆ ಎಂದು ಅದರಿಂದ ಓಡಿಹೋದರೆ ಹಗ್ಗವನ್ನು ಅರಿಯಲಾಗುವುದಿಲ್ಲ. ನಾವು ಧೈರ್ಯದಿಂದ ಕೋಲನ್ನು ತಂದು ಹೊಡೆಯಲು ಹೋದಾಗ ಸರ್ಪದ ಹಿಂದಿರುವ ಸತ್ಯ ತಿಳಿದುಬರುತ್ತದೆ. ಹಾಗೆಯೇ ಜಗತ್ತನ್ನು ಧೈರ್ಯವಾಗಿ ಎದುರಿಸಬೇಕು.

ಅಜ್ಞಾನದಿಂದ ಜಗತ್ತು ಕಾಣುತ್ತಿದೆ ಎಂದು ನಾವು ಹೇಳುತ್ತೇವೆ. ಆದರೆ ಅಜ್ಞಾನವೂ ಒಂದು ಜ್ಞಾನದ ಸ್ಥಿತಿಯೇ. ಆತ್ಮಜ್ಯೋತಿಯ ಬೆಳಕಿನಿಂದಲೇ ನಮಗೆ ಜಗತ್ತು ಕಾಣುತ್ತಿರುವುದು. ಆದ್ದರಿಂದ ಎಲ್ಲ ಜ್ಞಾನವೂ ಭಗವತ್ ಜ್ಞಾನವೇ. ಹಾಗೆಯೆ ಎಲ್ಲದರಲ್ಲಿಯೂ ಭಗವಂತನ ಸದಂಶ ವ್ಯಕ್ತವಾಗುತ್ತಿದೆ – ಆದ್ದರಿಂದ ಎಲ್ಲವೂ ಸತ್ಯವೆನಿಸುತ್ತದೆ. ಹಗ್ಗವೇ ಹಾವಿಗೆ ಅಸ್ತಿತ್ವವನ್ನು ನೀಡುವುದು. ವಿಷಯಗಳಿಂದ ನಾವು ಸುಖವನ್ನು ಅನುಭವಿಸುತ್ತಿರುವಾಗ ಆ ಸುಖವೂ ಭಗವದಾನಂದದ ಅಭಿವ್ಯಕ್ತಿ. ಜಡವಸ್ತುವು ನಮಗೆ ಆನಂದವನ್ನು ನೀಡಲಾರದು. ಹೀಗೆ ಎಲ್ಲದರ ಮೂಲಕವೂ ಭಗವಂತನನ್ನು ಕಾಣುವಂತಾಗಬೇಕು, ಎಲ್ಲದರಲ್ಲಿಯೂ ಭಗವದೈಶ್ವರ್ಯವನ್ನು ಕಾಣಬೇಕು ಎಂಬುದು ವಿಭೂತಿಯೋಗದ ಉದ್ದೇಶ.

ಸ್ವಾಮಿ ವಿವೇಕಾನಂದರ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು: "ನಿರತಿಶಯ ಪ್ರೇಮದ ಪರಿಣಾಮವಾಗಿ ತನಗೆ ಏನೇ ಆದರೂ ಅದು ಪ್ರತಿಕೂಲವಲ್ಲ ಎಂಬ ಆತ್ಮ ನಿವೇದನಾ ಭಾವನೆ ಪ್ರಾಪ್ತವಾಗುತ್ತದೆ. ಆಗ ಪ್ರೀತಿಸುತ್ತಿರುವ ಭಕ್ತನು ನೋವಾದರೆ ಆಗಲಿ, ಸಂತೋಷ ಎನ್ನುವನು. ದುಃಖ ಬಂದರೆ 'ನೀನೂ ಭಗವಂತನಿಂದಲೇ ಬಂದಿರುವೆ' ಎನ್ನುವನು. ಮೃತ್ಯು ಬಂದು ನಿಂತರೂ ಭಕ್ತನು ಹಸನ್ಮುಖದಿಂದ ಸ್ವೀಕರಿಸುವನು. 'ನಾನೇ ಧನ್ಯ, ಇವರೆಲ್ಲ ನನ್ನ ಹತ್ತಿರ ಬರುತ್ತಿರುವರು, ಎಲ್ಲರೂ ಬರಲಿ' ಎನ್ನುವನು. ಭಗವಂತ ಮತ್ತು ಆತನಿಗೆ ಸಂಬಂಧಪಟ್ಟ ವಸ್ತುಗಳನ್ನು ಅತಿ ಉತ್ಕಟವಾಗಿ ಪ್ರೀತಿಸುವುದರಿಂದ ಉಂಟಾಗುವ ಸಂಪೂರ್ಣ ಶರಣಾಗತಿಯ ಪ್ರಭಾವದಿಂದ ಸುಖದುಃಖಗಳಿಂದಾಗುವ ಪರಿಣಾಮವನ್ನು ಭಕ್ತನು ಭೇದಭಾವದಿಂದ ನೋಡುವುದಿಲ್ಲ. ವ್ಯಥೆ ಮತ್ತು ದುಃಖ

ಪ್ರಾಪ್ತವಾದಾಗ ಗೊಣಗಾಡುವುದನ್ನೇ ಅವನು ಅರಿಯನು. ಸ್ವಲ್ಪವೂ ಗೊಣಗಾಡದೆ ಪ್ರೇಮಮಯನಾದ ಭಗವಂತನ ಇಚ್ಛೆಗೆ ಬಾಗಿ ನಡೆಯುವುದು, ಅದ್ಭುತ ಸಾಹಸದಿಂದ ಗಳಿಸುವ ಕೀರ್ತಿಗಿಂತಲೂ ಮಿಗಿಲು." *(ಕೃತಿಶ್ರೇಣಿ, ೧. ೨೩೩)*

"ನಾನು ಆದಿತ್ಯರಲ್ಲಿ ವಿಷ್ಣು, ಬೆಳಗುವ ವಸ್ತುಗಳಲ್ಲೆಲ್ಲ ಸೂರ್ಯ, ನಕ್ಷತ್ರಗಳಲ್ಲಿ ಚಂದ್ರ ..." ಎಂದು ಮುಂತಾಗಿ ಭಗವಂತನು ಹೇಳುತ್ತಾ ಹೋಗುತ್ತಾನೆ. ಇವುಗಳನ್ನು ನಾವು ಕೇವಲ ವಾಚ್ಯಾರ್ಥದಲ್ಲಿ ಸ್ವೀಕರಿಸಬೇಕಾಗಿಲ್ಲ. ಸೂರ್ಯ ಅನೇಕ ನಕ್ಷತ್ರಗಳಲ್ಲಿ ಒಂದು, ಸೂರ್ಯನಿಗಿಂತ ಪ್ರಕಾಶಮಾನವಾದ ನಕ್ಷತ್ರಗಳಿವೆ. ಚಂದ್ರನು ನಕ್ಷತ್ರವೇ ಅಲ್ಲ, ಕೇವಲ ಉಪಗ್ರಹ – ಎಂದು ಮುಂತಾಗಿ ವೈಜ್ಞಾನಿಕವಾಗಿ ವಾದಿಸುವುದು ಸರಿಯಲ್ಲ. ನಮ್ಮ ಕಣ್ಣಿಗೆ ಯಾವುದು ವಿಶೇಷವಾಗಿ ಗೋಚರವಾಗುತ್ತದೆಯೋ ಅದರಲ್ಲಿ ದೇವರನ್ನು ಕಾಣಬೇಕು ಎಂಬುದು ಇದರ ಅರ್ಥ. ನಾವು ಇದನ್ನು ಆಧುನಿಕ ಸಂದರ್ಭಕ್ಕೆ ಅನ್ವಯಿಸಬೇಕು. ಶ್ರೀಕೃಷ್ಣನು ಈಗ ಬಂದಿದ್ದರೆ ಅವನು ಬಹುಶಃ ಹೀಗೆ ಹೇಳುತ್ತಿದ್ದಿರಬಹುದು: "ಅವತಾರಗಳಲ್ಲೆಲ್ಲ ನಾನು ಶ್ರೀರಾಮಕೃಷ್ಣರು, ವಾಗ್ಮಿಗಳಲ್ಲೆಲ್ಲ ನಾನು ವಿವೇಕಾನಂದ, ಸತ್ಯಸಂಧರಲ್ಲೆಲ್ಲ ನಾನು ಮಹಾತ್ಮಾ ಗಾಂಧಿ, ಕ್ರೈಸ್ತರಲ್ಲೆಲ್ಲ ನಾನು ಜೀಸಸ್ ಕ್ರೈಸ್ಟ್, ಆಯುಧಗಳಲ್ಲೆಲ್ಲ ನಾನು ಆಟಂಬಾಂಬ್, ನದಿಗಳಲ್ಲೆಲ್ಲ ನಾನು ಅಮೆಝಾನ್, ಕಟ್ಟಡಗಳಲ್ಲೆಲ್ಲ ನಾನು ತಾಜ್ ಮಹಲ್, ಆಟಗಳಲ್ಲೆಲ್ಲ ನಾನು ಕ್ರಿಕೆಟ್.." ಇತ್ಯಾದಿ ಇತ್ಯಾದಿ. ಆದ್ದರಿಂದಲೇ ಶ್ರೀಕೃಷ್ಣನು ಕೊನೆಯಲ್ಲಿ ಹೇಳುತ್ತಾನೆ: "ಎಲೈ ಅರ್ಜುನ, ನನ್ನ ದಿವ್ಯವಿಭೂತಿಗಳಿಗೆ ಕೊನೆಯಿಲ್ಲ. ಈ ವಿಭೂತಿಯ ವಿಸ್ತಾರವನ್ನು ನಾನು ಸಂಕ್ಷೇಪದಿಂದ ಹೇಳಿದ್ದೇನೆ." *(೧೦.೪೦)*

ಇಡೀ ವಿಭೂತಿಯೋಗದ ಅರ್ಥವನ್ನು ಅಡಕವಾಗಿ ಈ ಕೆಳಗಿನ ಶ್ಲೋಕದಲ್ಲಿ ವಿವರಿಸುತ್ತಾನೆ :

**ಯದ್ಯದ್ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್॥** (೪೧)

"ಯಾವ ಯಾವ ವಸ್ತು ವಿಭೂತಿಯುಳ್ಳದ್ದೋ, ಶ್ರೀಯುಕ್ತವೊ ಅಥವಾ ಉತ್ಸಾಹದಿಂದ ಕೂಡಿದೆಯೋ ಅದೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದ ಉಂಟಾದುದೆಂದು ತಿಳಿದುಕೊ." ಎಲ್ಲಿ ವಿಶೇಷ ಶಕ್ತಿಯ ಆವಿರ್ಭಾವ ಕಂಡುಬರುತ್ತದೆಯೋ, ಯಾರಲ್ಲಿ ವಿಶೇಷ ಪ್ರತಿಭೆಗಳಿರುತ್ತವೆಯೋ, ಯಾರು ಸಮಾಜದ ಒಳಿತಿಗಾಗಿ ಅವಿಶ್ರಾಂತ ದುಡಿಯುತ್ತಾರೊ ಅಲ್ಲೆಲ್ಲ ಭಗವಂತನ ವಿಭೂತಿಯನ್ನೇ ಕಾಣಬೇಕೆಂಬುದು ಇದರ ಅಭಿಪ್ರಾಯ. ಶ್ರೀರಾಮಕೃಷ್ಣರ ಜೀವನದಲ್ಲಿ ಬರುವ ಒಂದು ಘಟನೆಯನ್ನು ಇಲ್ಲಿ ಉದಾಹರಿಸಬಹುದು: ಅಸಾಮಾನ್ಯ ಪ್ರತಿಭೆಯ ಪಂಡಿತ ಈಶ್ವರಚಂದ್ರ ವಿದ್ಯಾಸಾಗರರು ಶ್ರೀರಾಮಕೃಷ್ಣರನ್ನು ಪ್ರಶ್ನಿಸುತಾರೆ, "ಮಹಾಶಯರೆ, ಭಗವಂತನ ಅಭಿವ್ಯಕ್ತಿಯಲ್ಲಿ ಒಬ್ಬರಲ್ಲಿ ಹೆಚ್ಚು ಇನ್ನೊಬ್ಬರಲ್ಲಿ ಕಡಿಮೆ ಎಂಬ ಪಕ್ಷಪಾತವಿರುವುದೆ?" ಎಂದು. ಶ್ರೀರಾಮಕೃಷ್ಣರು ಹೇಳುತ್ತಾರೆ: "ಹೌದು. ಹಾಗಿಲ್ಲದಿದ್ದರೆ ನಾನೇಕೆ ನಿನ್ನನ್ನು ನೋಡಲು ಬರುತ್ತೇನೆ? ನಿನ್ನಲ್ಲಿ ಉಳಿದವರಿಗಿಂತ ಹೆಚ್ಚಾಗಿ ಭಗವಂತನ ಅಭಿವ್ಯಕ್ತಿಯನ್ನು ನಾನು ಕಾಣುವುದರಿಂದಲೇ ನಿನ್ನನ್ನು ನೋಡಲು ಬರುವುದು. ಇನ್ನೂ ಎಷ್ಟೋ ಜನ ಬಂದು ನಿನಗೆ ಮರ್ಯಾದೆ ತೋರಿಸುತ್ತಾರೆ. ನಾವೆಲ್ಲ ಬಂದು ನಿನ್ನನ್ನು ನೋಡುವುದಕ್ಕೆ ನಿನಗೇನಾದರೂ ಎರಡು ಕೊಂಬು ಬೆಳೆದಿದೆಯೆ? ನಿನ್ನಲ್ಲಿ ಉತ್ತಮ ಶೀಲವಿದೆ. ನಿನ್ನ ಬುದ್ಧಿ ಸ್ಪಷ್ಟವಾಗಿದೆ. ನಿನ್ನ ಹೃದಯ ಅನುಕಂಪದಿಂದ ತುಂಬಿದೆ. ಆದ್ದರಿಂದ ದೈವೀಶಕ್ತಿ ನಿನ್ನಲ್ಲಿ ಉಳಿದವರಿಗಿಂತ ಹೆಚ್ಚು ಅಭಿವ್ಯಕ್ತವಾಗಿದೆ. ಅದಕ್ಕೇ ನಾವೆಲ್ಲ ನಿನ್ನನ್ನು ನೋಡಲು ಬರುವುದು." ಈ ಘಟನೆ ಮೇಲಿನ ಶ್ಲೋಕಕ್ಕೆ ಅತ್ಯುತ್ತಮವಾದ ವ್ಯಾಖ್ಯಾನ.

ಎಲ್ಲೆಲ್ಲಿಯೂ ಭಗವದ್ ವಿಭೂತಿಯನ್ನೇ ಕಾಣುವ ಭಕ್ತರ ಸ್ಥಿತಿ ಹೇಗಿರುತ್ತದೆ?

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥** *(೧೦.೯)*

"ನನ್ನಲ್ಲೇ ನೆಲೆಗೊಳಿಸಿದ ಮನಸ್ಸುಳ್ಳವರೂ ನನ್ನಲ್ಲಿಯೇ ಪ್ರಾಣವುಳ್ಳವರೂ, ನನ್ನನ್ನೇ ಪರಸ್ಪರವಾಗಿ ಬೋಧಿಸುತ್ತ, ಯಾವಾಗಲೂ ನನ್ನ ಕಥೆಯನ್ನೇ ಹೇಳುತ್ತ ಸಂತೋಷ ಪಡುತ್ತಾರೆ ಮತ್ತು ಆನಂದಪಡುತ್ತಾರೆ."

ಇಲ್ಲಿ **'ಮದ್ಗತಪ್ರಾಣಾ'** ಎಂಬುದಕ್ಕೆ ಶ್ರೀ ಮಧುಸೂದನ ಸರಸ್ವತಿಗಳು ಅನೇಕ ವಿವರಣೆಗಳನ್ನು ನೀಡುತ್ತಾರೆ. ಪ್ರಾಣ ಎಂದರೆ ಇಂದ್ರಿಯಗಳು. ಅವರ ಇಂದ್ರಿಯವಿಷಯಗಳೆಲ್ಲವೂ ಭಗವದ್‌ವಸ್ತುವೇ ಆಗಿರುತ್ತದೆ. ಶ್ರೀ ಬಸವಣ್ಣನವರು ಹೇಳುವಂತೆ, 'ವಚನದಲ್ಲಿ ನಾಮಾಮೃತ ತುಂಬಿ, ನಯನದಲಿ ನಿಮ್ಮ ಮೂರುತಿ ತುಂಬಿ, ಮನದಲಿ ನಿಮ್ಮ ನೆನಹು ತುಂಬಿ, ಕಿವಿಯಲಿ ನಿಮ್ಮ ಕೀರುತಿ ತುಂಬಿ, ಕೂಡಲಸಂಗಮದೇವರ ಚರಣಕಮಲದೊಳಗೆ (ಅವರು) ದುಂಬಿ' ಯಾಗಿರುತ್ತಾರೆ. ಶ್ರೀ ಮಧುಸೂದನ ಸರಸ್ವತಿಗಳು ನೀಡುವ ಇನ್ನೊಂದು ಅರ್ಥ, **ಮದ್‌ಭಜನಾರ್ಥಜೀವನಾ:** – "ಭಗವತ್ಸೇವೆಗಾಗಿಯೇ ಮುಡಿಪಾಗಿಟ್ಟ ಜೀವನವುಳ್ಳವರು. ಅವನ ಸೇವೆಯನ್ನು ಬಿಟ್ಟು ಜೀವನಕ್ಕೆ ಇನ್ನಾವ ಪ್ರಯೋಜನವೂ ಇಲ್ಲದವರು – ಎಂದರ್ಥ." ಅವರು ನೀಡುವ ಇನ್ನೊಂದು ಅರ್ಥ, **ಮದ್‌ಭಜನನಿಮಿತ್ತ ಚಕ್ಷುರಾದಿ ವ್ಯಾಪಾರಾಃ** "ಭಗವಂತನ ಸೇವೆಯಲ್ಲಿಯೇ ನಿರತವಾಗಿರುವ ಕಣ್ಣು ಮುಂತಾದ ಇಂದ್ರಿಯ ಕ್ರಿಯೆಗಳುಳ್ಳವರು." ಅಂದರೆ ಅವರು ಮಾಡುವ ಎಲ್ಲ ಕ್ರಿಯೆಗಳೂ ಭಗವತ್ಸೇವೆಯೇ, ಅವರ ಎಲ್ಲ ಕರಣಗಳೂ ಭಗವನ್ಮುಖವಾಗಿರುತ್ತವೆ. ಹೀಗೆ ಅವರು ಭಗವದ್‌ವಿಷಯವನ್ನೇ ಚರ್ಚಿಸುತ್ತಾರೆ, ಭಗವದ್ ವಿಷಯವನ್ನೇ ಮಾತನಾಡುತ್ತಾರೆ. ಅವರ ಮನಸ್ಸು ಭಗವದರ್ಪಣ, ಇಂದ್ರಿಯಗಳು ಭಗವದರ್ಪಣ ಹಾಗೂ ಜೀವನವೂ ಭಗವದರ್ಪಣ. ಹೀಗೆ ಭಗವತ್ಸೇವೆಯಲ್ಲಿಯೇ ಪೂರ್ಣ ತೃಪ್ತಿಯನ್ನು ಕಾಣುತ್ತಾರೆ. "ಇದರಿಂದಲೇ ಎಲ್ಲವನ್ನೂ ಪಡೆದ ದ್ದಾಯಿತು, ನಾವು ಇನ್ನೇನೂ ಪಡೆಯಬೇಕಾದದ್ದು ಇಲ್ಲ, ಎಂಬ ಸಂತೋಷವನ್ನು ಅವರು ಪಡೆಯುತ್ತಾರೆ." ಎಂದು ಮಧುಸೂದನರು ವಿವರಿಸುತ್ತಾರೆ. ಈ ಸಂತೋಷದಿಂದಲೇ ಅವರು ರಮಿಸುತ್ತಾರೆ. "ತೃಷ್ಣಾಕ್ಷಯವೇ ಸಂತೋಷ."

# ದಶಮಹಾವಿದ್ಯಾ

ಸ್ವಾಮಿ ಕರುಣಾಕರಾನಂದ



ಜಗನ್ಮಾತೆಯ ಆವಿರ್ಭಾವ ವಿವಿಧ ರೂಪಗಳಲ್ಲಿ, ವಿವಿಧ ಬಗೆಗಳಲ್ಲಿ ನಡೆದಂತೆ, ಹಲವು ರೀತಿಯ ಪೌರಾಣಿಕ ಚರಿತ್ರೆಗಳೂ, ವಿಭಿನ್ನ ಆಚರಣೆಗಳೂ, ಆರಾಧನೆಯ ಕ್ರಮಗಳೂ ಬೆಳೆದು ಬಂದವು. ಇಂಥ ಆವಿರ್ಭಾವಗಳಲ್ಲಿ ಒಂದಾದ ದಶಮಹಾವಿದ್ಯೆಯನ್ನು ಕುರಿತು ಸಂಕ್ಷಿಪ್ತ ಪರಿಚಯವನ್ನು ನೀಡಿರುವ ಲೇಖಕರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಂಗಸಂಸ್ಥೆಯಾದ 'ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ' (RIMSE) ಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ದೇವಿಯ ಸ್ವರೂಪ ಅನಂತ ಹಾಗೂ ಅಚಿಂತ್ಯ. ಆದಾಗ್ಯೂ ಉಪಾಸನೆಯ ದೃಷ್ಟಿಯಿಂದ ಆಕೆ ಬಗೆಬಗೆಯಾಗಿ ಉಪಾಸಕನ ಮಾನಸ ದೃಷ್ಟಿಗೆ ಗೋಚರಿಸಿ, ಸತ್ಕೃತಗೊಂಡು ಅವನನ್ನು ಲೌಕಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಅನುಗ್ರಹಿಸುವಳು. ಅನೇಕ ಪೌರಾಣಿಕ, ತಂತ್ರಗ್ರಂಥಗಳಲ್ಲಿ ದೇವಿಯ ಅನೇಕ ಸ್ವರೂಪಗಳ, ಉತ್ಪತ್ತಿಗಳ, ಉಪಾಸನೆಯ ವಿವರಗಳು ನಮಗೆ ಸಿಗುತ್ತವೆ. ಬ್ರಹ್ಮಾಂಡಪುರಾಣದ ಲಲಿತೋಪಾಖ್ಯಾನದಲ್ಲಿ ಬರುವ ಲಲಿತಾದೇವಿಯ ವರ್ಣನೆ, ಮಾರ್ಕಂಡೇಯ ಪುರಾಣದ ದುರ್ಗಾಸಪ್ತಶತೀ (ಚಂಡೀ) ಅತ್ಯಂತ ಪ್ರಸಿದ್ಧವೆ. ದ್ವಿತೀಯಮುಂಡಮಾಲಾತಂತ್ರದಲ್ಲಿ, *(ಶ್ಲೋಕ. ೭–೮)*

**ಕಾಲೀ ತಾರಾ ಮಹಾವಿದ್ಯಾ ಷೋಡಶೀ ಭುವನೇಶ್ವರೀ ।**
**ಭೈರವೀ ಛಿನ್ನಮಸ್ತಾ ಚ ವಿದ್ಯಾ ಧೂಮಾವತೀ ತಥಾ ॥**
**ಬಗಲಾಮುಖೀ ಸಿದ್ಧವಿದ್ಯಾ ಮಾತಂಗೀ ಕಮಲಾತ್ಮಿಕಾ ।**
**ಏತಾ ದಶಮಹಾವಿದ್ಯಾಃ ಸಿದ್ಧವಿದ್ಯಾಃ ಪ್ರಕೀರ್ತಿತಾಃ॥**

–ಎಂದು ಹತ್ತು ಮಹಾವಿದ್ಯಾ ದೇವೀಸ್ವರೂಪಿಣಿಯರ ಉಲ್ಲೇಖವಿದೆ. ಕಾಲೀ, ತಾರಾ, ಷೋಡಶೀ, ಭುವನೇಶ್ವರೀ, ಭೈರವೀ, ಛಿನ್ನಮಸ್ತಾ, ಧೂಮಾವತೀ, ಬಗಲಾಮುಖೀ, ಮಾತಂಗೀ ಮತ್ತು ಕಮಲಾ ಇವರೇ ಆ ಹತ್ತು ಮಹಾ ವಿದ್ಯೆಯರು. ಇವರಲ್ಲಿ ಮುಖ್ಯವಾಗಿ ಕಾಲೀ ಮತ್ತು ತಾರಾ ಸತ್ತ್ವಗುಣಪ್ರಧಾನರಾದ್ದರಿಂದ ಮೋಕ್ಷವನ್ನು ನೀಡುವವರು. ಷೋಡಶೀ (ತ್ರಿಪುರಸುಂದರೀ ಎಂಬುದು ಅವಳ ಇನ್ನೊಂದು ಹೆಸರು), ಭುವನೇಶ್ವರೀ ಹಾಗೂ ಛಿನ್ನಮಸ್ತಾ– ಈ ಮೂವರು ರಜೋಗುಣಪ್ರಧಾನರಾದ್ದರಿಂದ ಗೌಣವಾಗಿ ಮೋಕ್ಷವನ್ನು ನೀಡುವವರು. ಧೂಮಾವತೀ, ಭೈರವೀ, ಬಗಲಾ, ಮಾತಂಗೀ ಮತ್ತು ಕಮಲಾತ್ಮಿಕೆಯರು ತಮೋಗುಣಪ್ರಧಾನರಾದ್ದರಿಂದ ಇವರನ್ನು ಷಟ್‌ಕರ್ಮಗಳಲ್ಲಿ (ಮಾರಣ, ಉಚ್ಚಾಟನೆ, ಸ್ತಂಭನ, ವಶ್ಯ, ವಿದ್ವೇಷಣ ಹಾಗೂ ಶಾಂತಿ) ಮಾತ್ರ ಉಪಯೋಗಿಸುವರು.



## ಕಾಲೀ (ಕಾಳಿ)

ದಶಮಹಾವಿದ್ಯೆಯಲ್ಲಿ ಕಾಳಿಯೇ ಮೊದಲು. ಕಾಳಿಕಾಪುರಾಣದಲ್ಲಿ ಒಂದು ಕತೆ ಹೀಗಿದೆ. ದೇವತೆಗಳೆಲ್ಲ ಒಟ್ಟಿಗೆ ಕಲೆತು ಹಿಮಾಲಯದಲ್ಲಿ ಮಹಾಮಾಯೆಯನ್ನು ಕುರಿತು ಸ್ತುತಿಸಿದರು. ಮಹಾಮಾಯೆಯು ಮತಂಗ ಮುನಿಯ ಮಗಳ ರೂಪದಲ್ಲಿ ದೇವತೆಗಳ ಮುಂದೆ ಕಾಣಿಸಿಕೊಂಡು "ನೀವು ಯಾರನ್ನು ಸ್ತುತಿಸುತ್ತಿರುವಿರಿ?" ಎಂದು ಪ್ರಶ್ನಿಸಿದಳು. ಆ ಸಮಯದಲ್ಲಿಯೆ ಅವಳ ದೇಹದಿಂದ ಬೆಟ್ಟದಂತೆ ಕರ‍್ರಗಿದ್ದ ಸ್ತ್ರೀಶರೀರವೊಂದು ಹೊರಬಂದಿತು. ದೇವತೆಗಳ ಪರವಾಗಿ ಆ ಸ್ತ್ರೀರೂಪವೇ ಉತ್ತರಿಸಿತು, "ಇವರು ನನ್ನನ್ನೇ ಸ್ತುತಿಸುತ್ತಿರುವರು" ಎಂದು. ಕಾಡಿಗೆಯಂತೆ ಬಣ್ಣವನ್ನು ಹೊಂದಿದ್ದರಿಂದ ಅವಳಿಗೆ 'ಕಾಲೀ' (ಕಾಳಿ) ಎಂಬ ಹೆಸರು ಬಂತು. ದುರ್ಗಾಸಪ್ತಶತೀಯಲ್ಲಿಯೂ ಇಂತಹದ್ದೇ ಆಖ್ಯಾನಿಕೆಯು ಬರುತ್ತದೆ. ಶುಂಭ–ನಿಶುಂಭ ರಿಂದ ಹಿಂಸಿಸಲ್ಪಟ್ಟ ದೇವತೆಗಳು ಹಿಮಾಲಯದಲ್ಲಿ ದೇವೀಸೂಕ್ತದಿಂದ ಅವಳನ್ನು ಸ್ತುತಿಸಿದಾಗ, ಆ ಗೌರಿಯ ದೇಹದಿಂದ 'ಕೌಶಿಕೀ' ಯ ಉತ್ಪತ್ತಿಯಾಯಿತು. ಅವಳು ಗೌರಿಯ ದೇಹದಿಂದ ಹೊರಬಂದ ಕೂಡಲೇ ದೇವಿಯ ಮೈಯ ಬಣ್ಣ ಕಪ್ಪಾಯಿತು–

**ತಸ್ಯಾಂ ವಿನಿರ್ಗತಾಯಾಂ ತು ಕೃಷ್ಣಾಭೂತ್ ಸಾಪಿ ಪಾರ್ವತೀ।**
**ಕಾಲಿಕೇತಿ ಸಮಾಖ್ಯಾತಾ ಹಿಮಾಚಲಕೃತಾಶ್ರಯಾ ॥**

*(ದುರ್ಗಾಸಪ್ತಶತೀ ೫.೮೮)*

ಕಾಳಿಯು ದಕ್ಷಿಣಾಕಾಲೀ, ಶ್ಮಶಾನಕಾಲೀ, ಗುಹ್ಯಕಾಲೀ, ಭದ್ರಕಾಲೀ, ಕಾಮಕಲಾಕಾಲೀ, ಚಿಂತಾಮಣಿಕಾಲೀ, ಸ್ಪರ್ಶಮಣಿಕಾಲೀ, ಹಂಸಕಾಲೀ ಎಂಬುದಾಗಿ ಎಂಟು ಬಗೆಯವಳಾಗಿದ್ದಾಳೆ. ಕಾಳಿಯನ್ನು ಅನಾದಿರೂಪಳೆಂದೂ, ಆದ್ಯಾವಿದ್ಯೆಯೆಂದೂ, ಬ್ರಹ್ಮಸ್ವರೂಪಿಣಿಯೆಂದೂ, ಕೈವಲ್ಯದಾತ್ರಿಯೆಂಬುದಾಗಿಯೂ ಕರೆಯುವರು. ಪ್ರತಿಯೊಂದು ಶಕ್ತಿಗೂ ಒಬ್ಬೊಬ್ಬ ಶಿವನಿದ್ದಾನೆ. ಮಹಾಕಾಳಿಯ ಶಿವನ ಹೆಸರು 'ಮಹಾಕಾಲ'. ಕಾಳಿಯ ಧ್ಯಾನಮಂತ್ರ ಹೀಗಿದೆ:

**ಶವಾರೂಢಾಂ ಮಹಾಭೀಮಾಂ ಘೋರದಂಷ್ಟ್ರಾಂ ಹಸನ್ಮುಖೀಮ್।**
**ಚತುರ್ಭುಜಾಂ ಖಡ್ಗಮುಂಡವರಾಭಯಕರಾಂ ಶಿವಾಮ್ ॥**
**ಮುಂಡಮಾಲಾಧರಾಂ ದೇವೀಂ ಲಲಜ್ಜಿಹ್ವಾಂ ದಿಗಂಬರಾಮ್ ।**
**ಏವಂ ಸಂಚಿಂತಯೇತ್ ಕಾಲೀಂ ಶ್ಮಶಾನಾಲಯವಾಸಿನೀಮ್ ॥**

ದೇವಿಯಾದ ಕಾಳಿಯನ್ನು ಶ್ಮಶಾನವಾಸಿನಿಯಾಗಿರುವಂತೆಯೂ, ಮುಂಡಮಾಲೆಯನ್ನು ಧರಿಸಿರುವಂತೆಯೂ, ತನ್ನ ನಾಲಿಗೆಯನ್ನು ಹೊರಚಾಚಿರುವಂತೆಯೂ, ದಿಗಂಬರಳನ್ನಾಗಿಯೂ, ಭಯಾನಕವಾದ ಕೋರೆದಾಡೆಗಳಿಂದ ಕೂಡಿರುವಂತೆಯೂ, ಅತಿ ಭೀಕರಳಾಗಿರುವಂತೆಯೂ, ಶವವನ್ನೇ ತನ್ನ ವಾಹನವನ್ನಾಗಿ ಮಾಡಿಕೊಂಡು ಅದರ ಮೇಲೆ ನಿಂತಿರುವಂತೆಯೂ, ತನ್ನ ನಾಲ್ಕು ಕೈಗಳಲ್ಲಿ ಖಡ್ಗ, ಮುಂಡ, ವರಮುದ್ರೆ ಹಾಗೂ ಅಭಯಮುದ್ರೆಯನ್ನು ಧರಿಸಿರುವಂತೆಯೂ, ಮಂಗಳಕಾರಿಯಾಗಿಯೂ ಧ್ಯಾನ ಮಾಡತಕ್ಕದ್ದು.



## ತಾರಾ

ಕಾಳಿಯೇ ನೀಲಿ ಬಣ್ಣದವಳಾದಾಗ ತಾರಾ ಎನಿಸಿಕೊಳ್ಳುತ್ತಾಳೆ. ಅವಳನ್ನು ನೀಲಸರಸ್ವತೀಯೆಂಬುದಾಗಿಯೂ, ಉಗ್ರತಾರಾ ಎಂಬುದಾಗಿಯೂ ಕರೆಯುವರು. ಹಯಗ್ರೀವ ಎಂಬ ಹೆಸರಿನ ರಾಕ್ಷಸನನ್ನು ಸಂಹಾರ ಮಾಡುವಾಗ ದೇವಿಯು ನೀಲಿ ರೂಪದವಳಾದಳೆಂದು ತಂತ್ರಗ್ರಂಥಗಳಿಂದ ತಿಳಿದುಬರುತ್ತದೆ.

ಬೃಹನ್ನೀಲತಂತ್ರದ ಏಕಾದಶ ಪಟಲದಲ್ಲಿ ದೈತ್ಯರ ನಾಯಕರಾದ ಹಯಗ್ರೀವ ಮತ್ತು ಸೋಮಕರು ದೇವತೆಗಳು ಹವಿರ್ಭಾಗಗಳಿಂದ ಬಲಶಾಲಿಗಳಾಗಿಯೂ, ತಾವು ನಿಶ್ಶಕ್ತರಾಗಿಯೂ ಆಗುತ್ತಿರುವುದನ್ನು ದೈತ್ಯರಿಂದ ಅರಿತು, ಶಬ್ದಾಕರ್ಷಿಕೆಯೆಂಬ ದೇವಿಯನ್ನು ಕುರಿತು ಘೋರ ತಪಸ್ಸನ್ನು ಆಚರಿಸಿದರು. ಅವರ ತಪಸ್ಸಿನಿಂದ ಪ್ರಸನ್ನಳಾದ ದೇವಿಯು ಯಾವ ವರ ಬೇಕೆಂದು ಕೇಳಿದಾಗ, ಎಲ್ಲ ಶಬ್ದಗಳನ್ನು ಆಕರ್ಷಿಸುವ ಶಕ್ತಿ ತಮಗೆ ಪ್ರಾಪ್ತವಾಗಬೇಕೆಂದು ಬೇಡಿದರು. ಆ ವರದ ಪ್ರಭಾವದಿಂದ ಭೂಲೋಕದಲ್ಲಿ ವಿಪ್ರರ ಬಾಯಿಗಳಿಂದ ಶುಭ್ರಸ್ವರೂಪಿಣಿಯಾದ ಆ ವಾಣಿಯು ದೈತ್ಯರ ದುಷ್ಟಗೃಹಗಳಿಗೆ ಬಂದಳು. ಆ ದೇವಿಯನ್ನು ಸಮುದ್ರದ ಪಾತಾಳದಲ್ಲಿ ಹಾಲಾಹಲದ ಮಧ್ಯೆ ಸರ್ಪವನ್ನೇ ಹಗ್ಗವನ್ನಾಗಿಸಿ ಬಂಧಿಸಿಟ್ಟರು. ಅವಳನ್ನು ಪರ್ವತಗಳಿಂದ ಮರೆ ಮಾಡಿ ಪುನಃ ದೇವತೆಗಳನ್ನು ಜಯಿಸುವುದಕ್ಕಾಗಿ ಹೊರಟರು. ಮಂತ್ರಗಳಿಲ್ಲದೆ ಯಜ್ಞಗಳು ನಿಂತು ಹೋದವು. ದೇವತೆಗಳು ನಿರ್ವೀರ್ಯರಾದರು. ಅಸುರರು ಅವರನ್ನು ತಮ್ಮ ತಮ್ಮ ಸ್ಥಾನಗಳಿಂದ ಭ್ರಷ್ಟರನ್ನಾಗಿ ಮಾಡಿದರು. ಆಗ ವಿಷ್ಣುವು ವಾಣೀರೂಪಳಾದ ದೇವಿಯನ್ನು ಉದ್ಧಾರ ಮಾಡಲು ಬಹಳ ಮುಳ್ಳುಗಳಿರುವ ಪಾಠೀನ ಎಂಬ ಮತ್ಸ್ಯರೂಪವನ್ನು ಧರಿಸಿ ಚತುರ್ಭುಜಧಾರಿಯಾಗಿ ದೈತ್ಯರೊಡನೆ ಯುದ್ಧ ಮಾಡಿದನು. ಅವರನ್ನು ತನ್ನ ಆಯುಧಗಳಿಂದ ಕೊಂದ ವಿಷ್ಣುವು ದೇವಿಯನ್ನು ಬಂಧಿಸಿಟ್ಟಲ್ಲಿಗೆ ಹೋದಾಗ ಆಕೆ ಕೇವಲ ಅರೆಜೀವವಾಗಿದ್ದಳು. ಅವಳಿಗೆ ಅಭಯವನ್ನು ನೀಡಿದ ಭಗವಂತನು ಅವಳನ್ನು ಪುನರುಜ್ಜೀವಗೊಳಿಸಲು ಮೂರು ಬಾರಿ ಪ್ರಣವವನ್ನು ಉಚ್ಚರಿಸಿದನು. ಅದರಿಂದಲೂ ಆಕೆ ಚೇತರಿಸಿಕೊಳ್ಳದಿದ್ದಾಗ ಪ್ರಾಸಾದ ಮಂತ್ರವನ್ನು ಉಚ್ಚರಿಸಿದನು. ಅದರಿಂದಲೂ ಆಕೆಗೆ ಪ್ರಜ್ಞೆ ಮರಳದಿದ್ದಾಗ, ಷಡಕ್ಷರವನ್ನು ಉಚ್ಚರಿಸಿದನು. ಆಕೆಗೆ ಪ್ರಜ್ಞೆ ಮರಳಿ ಬಂದಿತು. ಆದರೂ ಆಕೆಯನ್ನು ಉಗ್ರವಾದ ಹಾಲಾಹಾಲದಲ್ಲಿಟ್ಟಿದ್ದರಿಂದ ಆಕೆಗೆ ನೀಲಸರಸ್ವತಿಯೆಂದೂ, ಉಗ್ರತಾರಾ ಎಂದೂ ಹೆಸರು ಬಂದಿತು. ಇವಳ ಶಿವನ ಹೆಸರು 'ಅಕ್ಷೋಭ್ಯ.'

**ಪ್ರತ್ಯಾಲೀಢಪದಾರ್ಪಿತಾಂಘ್ರಿಶವಹೃದ್‌ಘೋರಾಟ್ಟಹಾಸಾ ಪರಾ**
**ಖಡ್ಗೇಂದೀವರಕರ್ತೃಖರ್ಪರಭುಜಾ ಹೂಂಕಾರಬೀಜೋದ್ಭವಾ ।**
**ಖರ್ವಾನೀಲವಿಶಾಲಪಿಂಗಲಜಟಾಜೂಟೈಕನಾಗೈರ್ಯುತಾ**
**ಜಾಡ್ಯಂ ನ್ಯಸ್ಯ ಕಪಾಲಿಕೇ ತ್ರಿಜಗತಾಂ ಹನ್ತ್ಯುಗ್ರತಾರಾ ಸ್ವಯಮ್ ॥**

ಭಗವತೀ ತಾರಾಳು ಪ್ರತ್ಯಾಲೀಢ ಸ್ಥಿತಿಯಲ್ಲಿ (ಕಾಲೀಯ ಆಧುನಿಕ ಛಾಯಾಚಿತ್ರವನ್ನು ನೋಡಿದರೆ ತಿಳಿಯುತ್ತದೆ) ಶವರೂಪಿಯಾದ ಶಿವನ ಮೇಲೆ ನಿಂತುಕೊಂಡು ಅಟ್ಟಹಾಸಗೈಯ್ಯುತ್ತಿರುವಳು. ಆಕೆಯು ತನ್ನ ನಾಲ್ಕೂ ಕೈಗಳಲ್ಲಿ ಖಡ್ಗ, ನೀಲಕಮಲ, ಕತ್ತರಿ ಹಾಗೂ ತಲೆಬುರುಡೆಯನ್ನೇ ಪಾನಪಾತ್ರೆಯನ್ನಾಗಿ ಹೊಂದಿದ್ದಾಳೆ. ಹೂಂಕಾರ ಬೀಜದಿಂದ ಹುಟ್ಟಿದ ಆಕೆಯು ಕುಳ್ಳಗಿರುವಳು. ಆಕೆಯ ತಲೆಯ ಮೇಲೆ ಉದ್ದವಾದ ತಾಮ್ರವರ್ಣದ ಒಂದು ಜಟೆಯು, ಅನೇಕ ಸರ್ಪಗಳೂ ಇವೆ. ಅಂತಹ ಉಗ್ರತಾರಾ ದೇವಿಯು ಮೂರೂ ಲೋಕಗಳ ಜಾಡ್ಯವನ್ನು ತಾನೇ ನಾಶ ಮಾಡುವಳು.

## ಷೋಡಶೀ



ಷೋಡಶಿಗೆ ಬಾಲಾ, ಮಹಾತ್ರಿಪುರಸುಂದರೀ, ಲಲಿತಾ, ಪಂಚದಶೀ ಎಂದೂ ಹೆಸರುಗಳಿರುತ್ತವೆ. ಪಾರ್ವತಿಯು ತನ್ನ ಕಾಲೀರೂಪವನ್ನು ತ್ಯಜಿಸಿ ಗೌರಿಯ ರೂಪವನ್ನು ಧರಿಸಿದರೂ ಕೂಡ ಶಿವನು ಅವಳನ್ನು ಕಾಲೀ ಎಂದೇ ಮತ್ತೆ ಮತ್ತೆ ಕರೆಯುತ್ತಿದ್ದನು. ಇದರಿಂದ ಬೇಸರಗೊಂಡ ಪಾರ್ವತಿಯು ಆ ಸ್ಥಳವನ್ನು ತ್ಯಜಿಸಿ ಹೊರಟು ಹೋದಳು. ಶಿವನು ಆಕೆಯನ್ನು ಹುಡುಕಿದರೂ ಆಕೆ ಸಿಗಲಿಲ್ಲ. ಅಷ್ಟು ಹೊತ್ತಿಗೆ ನಾರದರು ಅಲ್ಲಿಗೆ ಬಂದಾಗ ಶಿವನು ಮುನಿಗೆ ತಮ್ಮಿಬ್ಬರ ನಡುವಿನ ವಿರಸವನ್ನು ವಿವರಿಸಿದನು. ನಾರದನು ಧ್ಯಾನಸ್ಥನಾಗಿ ಪಾರ್ವತಿಯು ಸುಮೇರು ಪರ್ವತದಲ್ಲಿ ಧ್ಯಾನದಲ್ಲಿ ಮುಳುಗಿದ್ದಾಳೆಂಬುದಾಗಿ ಅರಿತುಕೊಂಡನು. ನಾರದನು ಅಲ್ಲಿಗೆ ಬಂದು ಶಿವನು ಇನ್ನೊಂದು ಹೆಣ್ಣಿನೊಡನೆ ಸಂಬಂಧವನ್ನು ಹೊಂದಿದ್ದಾನೆಂಬುದಾಗಿಯೂ, ಪಾರ್ವತಿಯೇ ಈಗ ಅದನ್ನು ತಡೆಯಬೇಕೆಂದು ನುಡಿದನು. ಕೋಪದಿಂದ ಕೂಡಿದ ಪಾರ್ವತಿಯು ಅತ್ಯಂತ ಸುಂದರವಾದ ರೂಪವನ್ನು ಧರಿಸಿ ಶಿವನ ಬಳಿಗೆ ಬಂದಾಗ ಅವನ ಎದೆಯಲ್ಲಿ ತನ್ನದೇ ಪ್ರತಿಬಿಂಬವನ್ನು ಕಂಡು ನಿಜವಾಗಿಯೂ ಅವನ ಹೃದಯದಲ್ಲಿ ಇನ್ನೊಬ್ಬಳು ಹೆಣ್ಣು ಇದ್ದಾಳೆಂಬುದಾಗಿ ತಪ್ಪಾಗಿ ತಿಳಿದುಕೊಂಡು ಮತ್ತಿಷ್ಟು ಕೋಪಗೊಂಡಳು. "ನಾವು ಮದುವೆಯಾದ ಮೇಲೂ ನಿನ್ನ ಹೃದಯದಲ್ಲಿ ಮತ್ತೊಂದು ಹೆಣ್ಣಿಗೆ ಸ್ಥಾನವನ್ನು ಹೇಗೆ ಕೊಟ್ಟೆ?" ಎಂದಾಗ ಶಿವನು ನಗುತ್ತ, "ಸ್ವಲ್ಪ ಸರಿಯಾಗಿ ನೋಡು, ಆ ಪ್ರತಿಬಿಂಬ ಯಾರದ್ದು ಎಂಬುದಾಗಿ?" ಎಂದನು. ಅದು ತನ್ನದೇ ಪ್ರತಿಬಿಂಬವೆಂಬುದಾಗಿ ಅರಿತ ಪಾರ್ವತಿಯು "ನಾನು ಈಗ ನಿನ್ನ ಹೃದಯದಲ್ಲಿ ನೋಡಿದ ಹೆಣ್ಣಿನ ಹೆಸರೇನು?" ಎಂದು ಪ್ರಶ್ನಿಸಿದಾಗ "ನಿನ್ನ ಈ ರೂಪವು ದಶಮಹಾವಿದ್ಯೆಗಳಲ್ಲಿ ಒಂದಾದ ಷೋಡಶೀ ಎಂಬುದಾಗಿ ಪ್ರಸಿದ್ಧವಾಗಲಿ" ಎಂದು ಉತ್ತರಿಸಿದನು. ಇವಳ ಶಿವನ ಹೆಸರು 'ಪಂಚವಕ್ತ್ರ' ಎಂದು.

**ಬಾಲಾರ್ಕಮಂಡಲಾಭಾಸಾಂ ಚತುರ್ಬಾಹುಂ ತ್ರಿಲೋಚನಾಮ್ ।**
**ಪಾಶಾಂಕುಶಶರಾಂಶ್ಚಾಪಂ ಧಾರಯಂತೀಂ ಶಿವಾಂ ಭಜೇ ॥**

ಉದಯಿಸುತ್ತಿರುವ ಸೂರ್ಯನ ಮಂಡಲದಂತೆ ಕಾಂತಿಯುಳ್ಳ, ಮೂರು ಕಣ್ಣುಗಳುಳ್ಳ, ತನ್ನ ನಾಲ್ಕು ಬಾಹುಗಳಲ್ಲಿ ಪಾಶ, ಅಂಕುಶ, ಬಾಣ ಹಾಗೂ ಬಿಲ್ಲುಗಳನ್ನು ಧರಿಸಿರುವ ಶಿವೆಯನ್ನು ನಾನು ಭಜಿಸುತ್ತೇನೆ.

## ಮಾತಂಗೀ



ಇವಳನ್ನು ಚಂಡಾಲೀ, ಉಚ್ಛಿಷ್ಟ ಚಾಂಡಾಲೀ ಎಂಬುದಾಗಿಯೂ ಕರೆಯುವರು. 'ಮತಂಗ' ಶಿವನದ್ದೇ ಹೆಸರು. ಅವನ ಶಕ್ತಿಯಾದ್ದರಿಂದ ಮಾತಂಗೀ. ಸೃಷ್ಟಿಯ ಅಂಗಗಳನ್ನು ಅಳೆಯುವುದರಿಂದ 'ಮಾತಂಗೀ' ಎಂದು ದೇವಿಗೆ ಹೆಸರು. ಒಮ್ಮೆ ತನ್ನ ತಂದೆಯ ಮನೆಗೆ ಹೋಗಬೇಕಾದಾಗ ಮಹೇಶ್ವರಿಯು ಶಿವನ ಅನುಜ್ಞೆಯನ್ನು ಪಡೆಯಲೆಂದು ಬಂದಳು. ಶಿವನೂ ಅವಳೊಂದಿಗೆ ಹೋಗಲು ಬಯಸಿದನು. ಆದರೆ, ನಿಮಂತ್ರಣವಿಲ್ಲದೆ ಹೋಗಬಾರದೆಂದುಕೊಂಡನು. ಪಾರ್ವತಿಯು ಅವನೂ ಬರಬೇಕೆಂದು ಕೇಳಿಕೊಂಡಾಗ, ತಾನು ಬರಲಾರೆನೆಂದೂ, ಅವಳನ್ನು ವಾಪಸು ಕರೆತರುವಾಗ ಮಾತ್ರ ಬರುತ್ತೇನೆಂದೂ ಹೇಳಿ ಕಳುಹಿಸಿದನು. ಆದರೆ, ಅವಳನ್ನು ಬಿಟ್ಟಿರಲಾರದೆ, ಆಭರಣ ಮಾರುವವನ ವೇಷದಿಂದ ಅವಳ ಬಳಿಗೆ ಹೋದನು. ಅವನ ಆಭರಣಗಳನ್ನು ನೋಡಿದ ದೇವಿಯು ಕೆಲವೊಂದನ್ನು ಆರಿಸಿಕೊಂಡು ಅದರ ಬೆಲೆಯನ್ನು ಕೇಳಿದಾಗ ತನ್ನ ಮನೋಭಿಲಾಷೆಯನ್ನು ಪೂರೈಸಿದರೆ ತಾನು ಆ ಆಭರಣಗಳನ್ನು ಕೊಟ್ಟುಬಿಡುವುದಾಗಿ ಶಿವನು ನುಡಿದನು. ಅಂತಹ ಮಾತನಾಡುವ ಧೈರ್ಯ ಅದಾರಿಗಿದೆಯೆಂದು ಆಕೆ ಧ್ಯಾನಿಸಿದಾಗ ಶಿವನೇ ಇವನು ಎಂಬುದನ್ನು ಕಂಡುಕೊಂಡ ಪಾರ್ವತಿಯು ಅವನ ಇಚ್ಛೆಯನ್ನು ಬೇರೆ ಸಮಯದಲ್ಲಿ ಪೂರೈಸುವುದಾಗಿ ಹೇಳಿದಳು. ಆ ಸಂಜೆ ತಾನು ಒಬ್ಬ ಸುಂದರ ಚಂಡಾಲಿಯ ವೇಷವನ್ನು ಧರಿಸಿ ಸ್ನೇಹಿತೆಯೊಬ್ಬಳೊಂದಿಗೆ ಶಿವನಿರುವಲ್ಲಿಗೆ ಹೋದಳು. ಅವಳನ್ನು ಕಂಡ ಶಿವನು, "ಹೇ ಶುಭಾಂಗಿಯೇ, ಯಾರು ನೀನು? ನೀನಿಲ್ಲಿ ಬಂದಿರುವ ಉದ್ದೇಶವೇನು?" ಎಂದು ಕೇಳಿದಾಗ, ಪಾರ್ವತಿಯು ತಾನು ಚಂಡಾಲಿಯೆಂದೂ, ತಪಸ್ಸು ಮಾಡಿ ದೇವಿಯಾಗಬೇಕೆಂದು ಬಯಸಿರುವುದಾಗಿಯೂ, ಯಾರೂ ತನ್ನ ತಪಸ್ಸಿಗೆ ತೊಂದರೆ ಕೊಡಬಾರದೆಂಬುದಾಗಿ ಉತ್ತರಿಸಿದಳು. ತಕ್ಷಣ ಶಿವನು, "ನೀನು ನನ್ನನ್ನು ಮದುವೆಯಾದರೆ, ನಾನು ನಿನಗೆ ತಪಸ್ಸಿನ ಫಲವನ್ನು ನೀಡಿ ನಿನ್ನನ್ನು ಪಾರ್ವತಿಯಂತೆಯೇ ಮಾಡುವೆನು. ಸಂಶಯ ಬೇಡ" ಎಂದನು. ಶಿವನು ತನ್ನ ಸ್ವರೂಪವನ್ನು ಕಂಡು ಹಿಡಿದನೆಂಬುದಾಗಿ ಅರಿತ ದೇವಿಯು ಅವನಿಗೆ ತಲೆ ಬಾಗಿದಳು. "ದೇವಿ! ನನ್ನನ್ನು ಪ್ರಾರ್ಥಿಸುವ ಸಲುವಾಗಿ ನೀನು ಈ ರೂಪವನ್ನು ಸ್ವೀಕರಿಸಿದ್ದರಿಂದ ನಿನ್ನ ಈ ರೂಪವು ಮಾತಂಗೀ ಎಂದೇ ಪ್ರಸಿದ್ಧವಾಗಲಿ" ಎಂದು ಶಿವನು ದೇವಿಗೆ ಹೆಸರಿಟ್ಟನು.

**ಮಾಣಿಕ್ಯವೀಣಾಮುಪಲಾಲಯಂತೀಂ**
**ಮದಾಲಸಾಂ ಮಂಜುಲ ವಾಗ್ವಿಲಾಸಾಮ್ ।**
**ಮಹೇಂದ್ರನೀಲದ್ಯುತಿಕೋಮಲಾಂಗೀಂ**
**ಮತಂಗಕನ್ಯಾಂ ಮನಸಾ ಸ್ಮರಾಮಿ॥**

ಮಾಣಿಕ್ಯ ವೀಣೆಯನ್ನು ಪ್ರೀತಿಯಿಂದ ನುಡಿಸುತ್ತಿರುವ, ಮದದಿಂದ ಆಲಸಳಾಗಿರುವ, ಮಧುರವಾದ ಮಾತಿನ ವಿಲಾಸವುಳ್ಳ, ಮರಕತ ಮಣಿಯಂತೆ ನೀಲಿಯಾದ ಕಾಂತಿಯಿಂದ ಕೂಡಿರುವ ಮೃದುವಾದ ಶರೀರವುಳ್ಳವಳೇ, ಮತಂಗ ಋಷಿಯ ಕನ್ಯೆಯನ್ನು ಮನಸ್ಸಿನಿಂದ ಸ್ಮರಿಸುತ್ತೇನೆ.



## ಭುವನೇಶ್ವರೀ

ಇವಳಿಗೆ 'ರಾಜ ರಾಜೇಶ್ವರೀ' ಎಂಬ ಹೆಸರೂ ಇದೆ. 'ಪ್ರಾಣತೋಷಿಣಿ' ಯೆಂಬ ಗ್ರಂಥದಲ್ಲಿ ಇವಳ ವರ್ಣನೆಯಿದೆ. ಜಗತ್ತಿನ ಸೃಷ್ಟಿಯನ್ನು ಮಾಡುವ ಇಚ್ಛೆಯಿಂದ ಬ್ರಹ್ಮನು ಕ್ರಿಯಾಶಕ್ತಿಯನ್ನು ಕುರಿತು ಘೋರ ತಪಸ್ಸು ಮಾಡಿದನು. ಅವನ ತಪಸ್ಸಿನಿಂದ ಪ್ರೀತಳಾದ ಭುವನೇಶ್ವರಿಯು ಆವಿರ್ಭವಿಸಿದಳು. ಇವಳ ಶಿವ 'ತ್ರ್ಯಂಬಕ'.

**ಉದ್ಯದ್‌ದಿನದ್ಯುತಿಮಿಂದುಕಿರೀಟಾಂ**
**ತುಂಗಕುಚಾಂ ನಯನತ್ರಯಯುಕ್ತಾಮ್ ।**
**ಸ್ಮೇರಮುಖೀಂ ವರದಾಂಕುಶಪಾಶಾ**
**ಭೀತಿಕರಾಂ ಪ್ರಭಜೇ ಭುವನೇಶೀಮ್ ॥**

ಉದಯಿಸುತ್ತಿರುವ ಸೂರ್ಯನ ಕಾಂತಿಯಿಂದ ಕೂಡಿರುವ, ಚಂದ್ರನನ್ನೇ ತನ್ನ ಕಿರೀಟವನ್ನಾಗಿ ಧರಿಸಿರುವ ಉನ್ನತವಾದ ಸ್ತನಗಳಿಂದ ಕೂಡಿರುವ, ಮೂರು ಕಣ್ಣುಗಳುಳ್ಳ, ಮಂದಹಾಸಯುಕ್ತಳಾದ ತನ್ನ ನಾಲ್ಕು ಕೈಗಳಲ್ಲಿ ವರ ಮುದ್ರೆ, ಅಂಕುಶ, ಪಾಶ ಹಾಗೂ ಅಭಯ ಮುದ್ರೆಗಳನ್ನು ಧರಿಸಿರುವ ಭುವನೇಶ್ವರಿಯನ್ನು ನಾನು ಧ್ಯಾನಿಸುತ್ತೇನೆ.

## ಛಿನ್ನಮಸ್ತಾ

ಪಂಚರತ್ನವೆಂಬ ಗ್ರಂಥದಲ್ಲಿ ಛಿನ್ನಮಸ್ತಾ ದೇವಿಯ ವಿವರಣೆ ಸಿಗುತ್ತದೆ. ಒಮ್ಮೆ ಪಾರ್ವತಿಯು ತನ್ನ ಗೆಳತಿಯರಾದ ಡಾಕಿನಿ, ವರ್ಣಿನಿಯರೊಂದಿಗೆ ಮಂದಾಕಿನೀ ನದಿಯಲ್ಲಿ ಸ್ನಾನ ಮಾಡಲು ಹೋದಳು. ನದಿಯಲ್ಲಿ ಸ್ನಾನ ಮಾಡುತ್ತಿದ್ದಂತೆ ಅವಳಲ್ಲಿ ಸಂತಸವುಕ್ಕಿ ಪ್ರೇಮ ಸ್ವರೂಪಿಣಿಯೇ ಆದಳು.ಅವಳ ಬಣ್ಣ ಕಪ್ಪಾಯಿತು.



ಅವಳ ಗೆಳತಿಯರು ತಮಗೆ ಹಸಿವಾಗುತ್ತಿರುವುದಾಗಿಯೂ, ಆಹಾರ ನೀಡಬೇಕೆಂದೂ ಪಾರ್ವತಿಯನ್ನು ಕೇಳಿದರು. ನಂತರ ನೀಡುವುದಾಗಿ ಪಾರ್ವತಿಯು ಉತ್ತರಿಸಿದಾಗ, ತಮಗೆ ಅತ್ಯಂತ ಹಸಿವಾಗಿರುವುದಾಗಿಯೂ ಮನೆಗೆ ಹೋಗುವವರೆಗೂ ತಡೆಯಲಾಗುವುದಿಲ್ಲವೆಂದೂ, ಪಾರ್ವತಿಯು ತಮ್ಮ ಮಾತೆಯಾಗಿರುವುದರಿಂದ ತಮ್ಮ ಹಸಿವನ್ನು ತಕ್ಷಣವೇ ನೀಗಿಸುವುದು ಆಕೆಯ ಕರ್ತವ್ಯವೆಂದು ಡಾಕಿನಿ–ವರ್ಣಿನಿಯರು ನುಡಿದರು. ಕರುಣಾಮಯಿಯಾದ ಪಾರ್ವತಿಯು ನಗುತ್ತ ತನ್ನ ಉಗುರಿನ ತುದಿಯಿಂದಲೇ ತನ್ನದೇ ತಲೆಯನ್ನು ಕಡಿದುಕೊಂಡಳು. ಝಲ್ಲನೆ ಮೂರು ರಕ್ತದ ಧಾರೆಗಳೇ ಮೇಲೆದ್ದವು. ಎರಡು ರಕ್ತದ ಧಾರೆಗಳನ್ನು ಡಾಕಿನಿ–ವರ್ಣಿನಿಯರು ಕುಡಿದರೆ, ಮೂರನೆಯ ರಕ್ತದ ಧಾರೆಯನ್ನು ಪಾರ್ವತಿಯ ಕಡಿದ ರುಂಡವೇ ಕುಡಿಯಿತು! ಅವಳು ತನ್ನ ತಲೆಯನ್ನೇ ಕಡಿದು ಕೊಂಡದ್ದರಿಂದ ಛಿನ್ನಮಸ್ತಾ ಎಂದೆನಿಸಿಕೊಳ್ಳುತ್ತಾಳೆ. ಈಕೆಯ ಶಿವ 'ಕಬಂಧ'.

**ಭಾಸ್ವನ್‌ಮಂಡಲಮಧ್ಯಗಾಂ ನಿಜಶಿರಶ್ಛಿನ್ನಂ ವಿಕೀರ್ಣಾಲಕಂ**
**ಸ್ಫಾರಾಸ್ಯಂ ಪ್ರಪಿಬದ್‌ಗಲಾತ್‌ಸ್ವರುಧಿರಂ ವಾಮೇ ಕರೇ ಬಿಭ್ರತೀಮ್।**
**ಯಾಭಾಸಕ್ತರತಿಸ್ಮರೋಪರಿಗತಾಂ ಸಖ್ಯೌ ನಿಜೇ ಡಾಕಿನೀ–**
**ವರ್ಣಿನ್ಯೌ ಪರಿದೃಶ್ಯಮೋದಕಲಿತಾಂ ಶ್ರೀಛಿನ್ನಮಸ್ತಾಂ ಭಜೇ ॥**

ಸೂರ್ಯಮಂಡಲದ ಮಧ್ಯದಲ್ಲಿರುವ ತನ್ನ ಎಡಗೈಯಲ್ಲಿ ತನ್ನದೇ ಕಡಿದ ತಲೆಯನ್ನು ಹಿಡಿದುಕೊಂಡಿರುವ, ಕೆದರಿದ ತಲೆಗೂದಲಿನ, ತನ್ನ ಕಂಠದಿಂದ ಸುರಿಯುತ್ತಿರುವ ರಕ್ತದ ಧಾರೆಯನ್ನು ಸ್ವಯಂ ತಾನೇ ಕುಡಿಯುವವಳಾಗಿ, ವಿಪರೀತ ರತಿಯಲ್ಲಿ ಆಸಕ್ತರಾದ ರತಿ ಹಾಗೂ ಕಾಮದೇವರ ಮೇಲೆ ನಿಂತುಕೊಂಡಿರುವ, ತನ್ನ ಸಖಿಯರಾದ ಡಾಕಿನೀ–ವರ್ಣಿನಿಯರೊಂದಿಗೆ ಪ್ರಸನ್ನಳಾಗಿರುವ ಭಗವತೀ ಛಿನ್ನಮಸ್ತಾಳನ್ನು ನಾನು ಧ್ಯಾನಿಸುತ್ತೇನೆ.

## ಬಗಲಾ

ಪ್ರಾಣತೋಷಿಣಿ ತಂತ್ರದಲ್ಲಿ ಬಗಲಾದೇವಿಯ ಉತ್ಪತ್ತಿಯ ವಿವರ ಸಿಗುತ್ತದೆ. ಒಮ್ಮೆ ಸತ್ಯಯುಗದಲ್ಲಿ ಸಮಸ್ತ ವಿಶ್ವವನ್ನೂ ನಾಶ ಮಾಡುವ ಚಂಡಮಾರುತವು ಎದ್ದಿತು. ಇದನ್ನು ನೋಡಿದ ಜಗತ್ತಿನ ರಕ್ಷಣೆಯನ್ನು ಹೊತ್ತ ವಿಷ್ಣುವು ಬಹಳ ಚಿಂತೆಗೀಡಾದನು. ಆಗ ಅವನು ಸೌರಾಷ್ಟ್ರ ದೇಶದಲ್ಲಿರುವ ಹರಿದ್ರಾ ಸರೋವರದ ಬಳಿ ಹೋಗಿ ತಪಸ್ಸನ್ನು ಮಾಡಿ



ಭಗವತಿಯನ್ನು ಪ್ರಸನ್ನಗೊಳಿಸಿದನು. ಭಗವತಿಯು ಆಗ ಆ ಸರೋವರದಿಂದ ಹಳದಿ ಬಣ್ಣದ ಉಡುಗೆ ಧರಿಸಿ ಅವನಿಗೆ ದರ್ಶನ ನೀಡಿದಳು. ಅವಳ ಶಕ್ತಿಯಿಂದ ಹೆಚ್ಚುತ್ತಿರುವ ಜಲದ ಹಾಗೂ ವಾಯುವಿನ ವೇಗಗಳು ನಿಂತುಕೊಂಡವು. ಒಮ್ಮೆ ದುರ್ಗಮನೆಂಬ ಅಸುರನ ಮಗನಾದ ರುರುವು ಜಗತ್ತನ್ನೇ ಗೆಲ್ಲಲು ಬ್ರಹ್ಮನನ್ನು ಕುರಿತು ತಪಸ್ಸನ್ನು ಮಾಡಲು ಆರಂಭಿಸಿದನು. ಮೊದಲೇ ಪರಾಕ್ರಮಿಯಾದ ಈತನು ವರ ಪಡೆದ ಮೇಲೆ ಇನ್ನೇನು ಮಾಡುವನೋ ಎಂಬ ಭಯದಿಂದ ಹರಿದ್ರೆಗೆ ಹೋಗಿ ಅಲ್ಲಿ ದೇವಿಯನ್ನು ಸಂತೋಷಗೊಳಿಸಿದಾಗ ಭಗವತಿಯು ಬಗಲಾ ದೇವಿಯಾಗಿ ಆವಿರ್ಭವಿಸಿ ಅಸುರನ ನಾಲಿಗೆಯನ್ನು ಸ್ತಂಭನಗೊಳಿಸಿದಳೆಂಬುದಾಗಿ ಕತೆಯಿದೆ. ಇವಳ ಶಿವನು 'ಏಕವಕ್ತ್ರ ಮಹಾರುದ್ರ'.

**ಜಿಹ್ವಾಗ್ರಮಾದಾಯ ಕರೇಣ ದೇವೀಂ**
**ವಾಮೇನ ಶತ್ರೂನ್ ಪರಿಪೀಡಯಂತೀಮ್ ।**
**ಗದಾಭಿಘಾತೇನ ಚ ದಕ್ಷಿಣೇನ**
**ಪೀತಾಂಬರಾಢ್ಯಾಂ ದ್ವಿಭುಜಾಂ ನಮಾಮಿ ॥**

ತನ್ನ ಎಡ ಕೈಯಿಂದ ಶತ್ರುಗಳ ನಾಲಿಗೆಯನ್ನು ಎಳೆದು ಹೊರಚಾಚಿ, ಬಲಗೈಯ ಗದೆಯಿಂದ ಶತ್ರುವಿಗೆ ಹೊಡೆದು ಅವರನ್ನು ಪೀಡಿಸುತ್ತಿರುವ, ಹಳದಿ ಬಣ್ಣದ ದಿರಿಸನ್ನು ಧರಿಸಿರುವ, ಎರಡು ಕೈಗಳ ದೇವಿಯನ್ನು ನಮಸ್ಕರಿಸುತ್ತೇನೆ.



## ಧೂಮಾವತೀ

ಒಮ್ಮೆ ಕೈಲಾಸದಲ್ಲಿ ಪಾರ್ವತಿಯು ಶಿವನ ತೊಡೆಯ ಮೇಲೆ ಕುಳಿತಿದ್ದಾಗ, ತನಗೆ ಅತ್ಯಂತ ಹಸಿವಾಗಿರುವುದಾಗಿಯೂ ತಕ್ಷಣ ತಿನ್ನಲು ಏನಾದರೂ ಕೊಡಬೇಕೆಂದು ಕಾಡಿದಳು. ಶಿವನು, ಆಕೆಗೆ ಸ್ವಲ್ಪ ತಡೆಯಲು ಹೇಳಿ ಪುನಃ ಧ್ಯಾನಸ್ಥನಾದನು. ಪಾರ್ವತಿಯು ಮತ್ತೆ ಮತ್ತೆ ಶಿವನನ್ನು "ಹೇ ವಿಶ್ವನಾಥ, ಆಹಾರವನ್ನು ನೀಡು. ನನಗೆ ಹಸಿವೆಯನ್ನು ತಡೆಯಲು ಸಾಧ್ಯವಾಗುತ್ತಿಲ್ಲ" ಎಂದು ಪ್ರಾರ್ಥಿಸಿದಳು. ಶಿವನು ಮತ್ತೊಮ್ಮೆ ಸಮಾಧಾನ ಮಾಡಲು ಪ್ರಯತ್ನಿಸಿದಾಗ ಹಸಿವೆಯಿಂದ ವ್ಯಗ್ರಳಾದ ಪಾರ್ವತಿಯು ಶಿವನನ್ನೇ ತಿಂದುಬಿಟ್ಟಳು. ತಕ್ಷಣವೇ ಅವಳ ಶರೀರದಿಂದ ಹೊಗೆಯೇಳಲು ಶುರುವಾಯಿತು. ಅವಳ ಒಳಗಿದ್ದ ಶಿವನು ಮೂರನೇ ಕಣ್ಣನ್ನು ತೆರೆದಿದ್ದನು. "ನಾನಿಲ್ಲದೇ ಈಗ ಜಗತ್ತಿನಲ್ಲಿ ಪುರುಷನೇ ಇಲ್ಲವಾಯಿತು. ನೀನೊಬ್ಬಳೇ ಇರುವುದರಿಂದ ಪ್ರಕೃತಿಯೊಂದೇ ಉಳಿದುಕೊಂಡಿತು" ಎಂದನು. ಈ ಕಾರಣದಿಂದ ವಿಧವೆಯ ರೂಪವನ್ನು ಧರಿಸಿದ ಪಾರ್ವತಿಯು ಧೂಮಾವತಿಯಾದಳು. ಈ ರೂಪದಲ್ಲಿ ಯಾವುದೇ ಆಭರಣಗಳಿಲ್ಲದೆ ಬಿಳಿ ಬಟ್ಟೆಯನ್ನುಟ್ಟ, ಕೆದರಿದ ತಲೆಗೂದಲನ್ನು ದೇವಿಯು ಹೊಂದಿರುವಳು. ಪುರುಷ ಶೂನ್ಯಳಾದ್ದರಿಂದ ಇವಳಿಗೆ ಶಿವನು ಯಾರೂ ಇರುವುದಿಲ್ಲ.

**ವಿವರ್ಣಾ ಚಂಚಲಾ ರುಷ್ಟಾ ದೀರ್ಘಾ ಚ ಮಲಿನಾಂಬರಾ ।**
**ವಿಮುಕ್ತಕುಂತಲಾ ರುದ್ರಾ ವಿಧವಾ ವಿರಲದ್ವಿಜಾ ॥**
**ಕಾಕಧ್ವಜರಥಾರೂಢಾ ವಿಲಂಬಿತಪಯೋಧರಾ ।**
**ಶೂರ್ಪಹಸ್ತಾತಿರುಕ್ಷಾ ಚ ಧೃತಹಸ್ತಾ ವರಾನ್ವಿತಾ ॥**
**ಪ್ರವೃದ್ಧಘೋಣಾ ತು ಭೃಶಂ ಕುಟಿಲಾ ಕುಟಿಲೇಕ್ಷಣಾ ।**
**ಕ್ಷುತ್‌ಪಿಪಾಸಾರ್ದಿತಾ ನಿತ್ಯಂ ಭಯದಾ ಕಲಹಪ್ರಿಯಾ ॥**

'ಭಗವತಿಯಾದ ಧೂಮಾವತಿಯು ವಿವರ್ಣಳಾಗಿದ್ದಾಳೆ. ಚಂಚಲೆಯೂ, ಕೋಪದಿಂದಿರುವವಳೂ, ವಿಶಾಲ ಕಾಯಳೂ, ಕೊಳಕು ಬಟ್ಟೆಯನ್ನೇ ಉಟ್ಟಿರುವವಳೂ, ಕೆದರಿದ ಕೂದಲುಗಳುಳ್ಳವಳೂ, ನೋಡಲು ಭಯ ಹುಟ್ಟಿಸುವವಳೂ, ಕಡಿಮೆ ಹಲ್ಲುಗಳಿರುವವಳೂ, ಕಾಗೆಯ ಧ್ವಜವಿರುವ ರಥದಲ್ಲಿ ಕುಳಿತಿರುವವಳೂ, ಜೋಲು ಬಿದ್ದಿರುವ ಸ್ತನಗಳುಳ್ಳವಳೂ, ಅತ್ಯಂತ ಒರಟಾಗಿರುವ ಕೈಯಲ್ಲಿ ಮೊರವನ್ನು ಹಿಡಿದಿರುವವಳೂ, ಇನ್ನೊಂದು ಕೈಯಲ್ಲಿ ವರ ಮುದ್ರೆಯನ್ನು ಹೊಂದಿರುವವಳೂ, ಉದ್ದ ಮೂಗಿರುವವಳೂ, ತನ್ನ ಸ್ವಭಾವ ಹಾಗೂ ದೃಷ್ಟಿಯಲ್ಲಿ ಕುಟಿಲತೆಯಿರುವವಳೂ, ಹಸಿವು-ಬಾಯಾರಿಕೆಗಳಿಂದ ಕೂಡಿರುವವಳೂ, ಯಾವಾಗಲೂ ಭಯವನ್ನುಂಟುಮಾಡುವವಳೂ, ಜಗಳವಾಡಲು ಬಯಸುವವಳೂ ಆಗಿದ್ದಾಳೆ.'

## ತ್ರಿಪುರಸುಂದರೀ

ಇವಳನ್ನು ಕಮಲಾ ಎಂದೂ ಕರೆಯುತ್ತಾರೆ. ಮಹಾಲಕ್ಷ್ಮಿಯ ಸ್ವರೂಪದಿಂದ ಇವಳು ಸಂಪತ್ತನ್ನು ಬಿಂಬಿಸುತ್ತಾಳೆ. ಒಮ್ಮೆ ರಂಭೆಯೊಂದಿಗೆ ವಿಲಾಸವಾಡುತ್ತಿದ್ದ ಇಂದ್ರನು ದೂರ್ವಾಸ ಕೊಟ್ಟ ಹೂಮಾಲೆಯನ್ನು ಐರಾವತದ ತಲೆಯ ಮೇಲೆ ಹಾಕಿದನು. ಇದರಿಂದ ಅಪಮಾನಿತರಾದ ದೂರ್ವಾಸರು ಅವನ ಸಮಸ್ತ ಐಶ್ವರ್ಯ ನಾಶವಾಗಲೆಂದು ಶಪಿಸಿದರು.



ದೇವಿ ಲಕ್ಷ್ಮಿಯು ದೇವಲೋಕವನ್ನು ಬಿಟ್ಟು ಹೊರಟು ಹೋದಳು. ಎಲ್ಲ ದೇವತೆಗಳು ಇಂದ್ರನನ್ನು ಮುಂದು ಮಾಡಿ ಕೊಂಡು ಈ ದುಃಖವನ್ನು ಹೋಗಲಾಡಿಸು ವುದಕ್ಕಾಗಿ ವಿಷ್ಣು ವಿನ ಬಳಿಗೆ ಹೋದರು. ಅವರಿಗೆ ಕ್ಷೀರಸಾಗರವನ್ನು ಕಡೆಯುವ ಸಲಹೆ ಸಿಕ್ಕಿತು. ಮಂದರ ಪರ್ವತವು ಕಡೆಗೋಲಾಯಿತು. ಅನಂತನಾಗವೇ ದೊಡ್ಡ ಹಗ್ಗವಾಯಿತು. ವಿಷ್ಣುವೇ ಆಮೆಯ ರೂಪವನ್ನು ತಾಳಿ ಮಂದರ ಪರ್ವತಕ್ಕೆ ಆಧಾರವಾದನು. ಅನೇಕ ವಿಚಿತ್ರ ವಸ್ತುಗಳು ಆ ಕಡೆಯುವಿಕೆಯಿಂದ ಹುಟ್ಟಿದವು. ಕೊನೆಗೆ ಲಕ್ಷ್ಮಿಯು ಹೊರಬಂದಳು. ದೇವತೆಗಳು ಸಂತಸದಿಂದ ಆಕೆ ಯನ್ನು ಪೂಜಿಸಿ ತಮ್ಮ ಬಳಿಯಲ್ಲಿಯೇ ಇರಲು ಹೇಳಿದಾಗ ಒಪ್ಪಿ ಕೊಂಡಳು. ಅವಳೇ ತ್ರಿಪುರಸುಂದರಿಯಾದಳು. ಮೂರೂ ಲೋಕದಲ್ಲಿ ಅವಳ ಸೌಂದರ್ಯವು ಪ್ರಖ್ಯಾತವಾದ್ದರಿಂದ ಆ ಹೆಸರು ಅವಳಿಗೆ ಬಂದಿತು. ಇವಳ ಶಿವನು 'ಸದಾಶಿವ ವಿಷ್ಣು'.

**ಕಾಂತ್ಯಾ ಕಾಂಚನಸಂನಿಭಾಂ ಹಿಮಗಿರಿಪ್ರಖ್ಯೈಶ್ಚತುರ್ಭಿರ್ಗಜೈ-**
**ರ್ಹಸ್ತೋತ್ಕ್ಷಿಪ್ತಹಿರಣ್ಮಯಾಮೃತಘಟೈರಾಸಿಚ್ಯಮಾನಾಂ ಶ್ರಿಯಮ್ ।**
**ಬಿಭ್ರಾಣಾಂ ವರಮಬ್ಜಯುಗ್ಮಮಭಯಂ ಹಸ್ತೈಃ ಕಿರೀಟೋಜ್ಜ್ವಲಾಂ**
**ಕ್ಷೌಮಾಬದ್ಧನಿತಂಬಬಿಂಬಲಲಿತಾಂ ವಂದೇರವಿಂದಸ್ಥಿತಾಮ್ ॥**

ಸುವರ್ಣದ ಕಾಂತಿಯನ್ನು ಹೊಂದಿರುವ, ಯಾರ ಮೇಲೆ ಹಿಮವಂತನ ಬಣ್ಣವಿರುವ ನಾಲ್ಕು ಆನೆಗಳು ತಮ್ಮ ಸೊಂಡಿಲುಗಳಿಂದ ಅಮೃತಕುಂಭಗಳಲ್ಲಿ ತುಂಬಿರುವ ಸುವರ್ಣವನ್ನೇ ಅವಳ ಮೇಲೆ ಸಿಂಪಡಿಸುತ್ತಾ ಇವೆಯೊ, ಯಾರು ತನ್ನ ಕೈಗಳಲ್ಲಿ ವರಮುದ್ರೆ, ಕಮಲಗಳನ್ನು ಧರಿಸಿರು ವಳೋ, ರೇಷ್ಮೆಯ ಸೀರೆಯಿಂದ ಒಪ್ಪುವ ಮೈಮಾಟವನ್ನು ಹೊಂದಿರುವ, ಕಮಲದ ಮೇಲೆ ಆಸೀನಳಾಗಿರುವ ಕಮಲೆ ಯನ್ನು ನಮಸ್ಕರಿಸುತ್ತೇನೆ.

## ತ್ರಿಪುರ ಭೈರವೀ

ಚಂಡಮುಂಡರನ್ನು ಸಂಹಾರ ಮಾಡುವ ಸಲುವಾಗಿ ದೇವಿಯು ಭೈರವೀರೂಪವನ್ನು ತಾಳಿದಳು. ಇವಳ ಶಿವನು 'ದಕ್ಷಿಣಾಮೂರ್ತಿ' ಅಥವಾ ಕಾಲಭೈರವ.

**ಉದ್ಯದ್‍ಭಾನುಸಹಸ್ರಕಾಂತಿಮರುಣಕ್ಷೌಮಾಂ ಶಿರೋಮಾಲಿಕಾಂ**
**ರಕ್ತಾಲಿಪ್ತಪಯೋಧರಾಂ ಜಪವಟೀಂ ವಿದ್ಯಾಮಭೀತಿಂ ವರಮ್ ।**
**ಹಸ್ತಾಬ್ಜೈರ್ದಧತೀಂ ತ್ರಿನೇತ್ರವಿಲಸದ್‍ವಕ್ತ್ರಾರವಿಂದಶ್ರಿಯಂ**
**ದೇವೀಂ ಬದ್ಧಹಿಮಾಂಶುರತ್ನಮುಕುಟಾಂ ವಂದೇ ಸುಮಂದ ಸ್ಮಿತಾಮ್ ॥**

ಉದಯಿಸುತ್ತಿರುವ ಸೂರ್ಯನ ಸಾವಿರದಷ್ಟು ಕಾಂತಿ ಯುಳ್ಳ, ಕೆಂಪು ರೇಷ್ಮೆಯ ವಸ್ತ್ರವನ್ನು ಧರಿಸಿರುವ, ಮುಂಡ ಗಳ ಮಾಲೆಯನ್ನು ಧರಿಸಿರುವ, ರಕ್ತದಿಂದ ತೊಯ್ದ ಸ್ತನಗಳುಳ್ಳ, ತನ್ನ ಕರಕಮಲಗಳಲ್ಲಿ ಜಪಮಾಲೆಯನ್ನು ಧರಿಸಿ ವಿದ್ಯೆ, ಅಭೀತಿ ಮತ್ತು ವರ ಎಂಬ ಮುದ್ರೆಗಳನ್ನು ಪ್ರದರ್ಶಿಸುತ್ತಿರುವ, ಮೂರು ಕಣ್ಣುಗ ಳಿಂದಲೂ ಮತ್ತು ಕಾಂತಿಯುಕ್ತವಾದ ವದನಾರವಿಂದದ ಶೋಭೆಯಿಂದಲೂ ಕೂಡಿರುವ, ರತ್ನ ಕಿರೀಟದ ತುದಿಯಲ್ಲಿ ಚಂದ್ರನನ್ನುಳ್ಳ, ಸುಂದರ ಮಂದ ಹಾಸದಿಂದ ಕೂಡಿರುವ ದೇವಿಯನ್ನು ನಮಸ್ಕರಿಸುತ್ತೇನೆ.

## ಉಪಸಂಹಾರ

ದೇವಿಯ ಈ ರೂಪಗಳೆಲ್ಲ ರಹಸ್ಯಮಯವಾಗಿರುವುದು. ದೇವಿಯ ರೂಪದ ಹಿಂದಿರುವ ತತ್ತ್ವವನ್ನು ನುರಿತ ಸಾಧಕ ರಿಂದ ಮಾತ್ರವೇ ಕೇಳಿ ತಿಳಿದುಕೊಳ್ಳಬೇಕು. ತಂತ್ರದಲ್ಲಿ ಸಂಕೇತಗಳಿಗೆ ಪ್ರಾಧಾನ್ಯವಿರುವುದರಿಂದ ನಮ್ಮ ಪ್ರಾಣಿಸಹಜ ಸಂಸ್ಕಾರಯುಕ್ತವಾದ ಮನಸ್ಸಿನಿಂದ ಇವುಗಳಿಗೆ ಅರ್ಥಗಳನ್ನು ಕಲ್ಪಿಸಹೋದರೆ ಭರಿಸಲಾರದ ನಷ್ಟವಾಗುವುದು ನಮಗೇ. ಮೇಲ್ನೋಟಕ್ಕೆ ಈ ದೇವಿಯ ವಿಶಿಷ್ಟರೂಪಗಳ ಹಿಂದಿರುವ ಘಟನೆಗಳು ಬಾಲಿಶವಾಗಿ ಕಂಡರೂ ಅದರ ಹಿಂದೆ ರಹಸ್ಯ ತತ್ತ್ವವು ಅಡಗಿದೆಯೆಂಬುದಾಗಿ ತಿಳಿಯಬೇಕು. ಸಮಸ್ತ ಸೃಷ್ಟಿಯೇ ಭಗವಂತನ ಸಂಕೇತ. ಹಾಗೆ ಒಂದೇ ದೇವಿಯ ಚೈತನ್ಯತತ್ತ್ವವನ್ನು ನಮಗೆ ಮನವರಿಕೆ ಮಾಡಿಕೊಡುವುದೇ ದಶಮಹಾವಿದ್ಯೆಗಳ ಉದ್ದೇಶ. ಇವುಗಳಲ್ಲಿ ಒಂದೊಂದು ಮಹಾವಿದ್ಯೆಯೂ ಒಂದೇ ಶಕ್ತಿಯ ಬೇರೆ ಬೇರೆ ಆಯಾಮಗಳು. ತನ್ನ ಸಂಸ್ಕಾರ ಹಾಗೂ ಅಭಿರುಚಿಗೆ ತಕ್ಕಂತೆ ಆಯಾ ಆಯಾಮಗಳಿಂದ ದೇವಿಯನ್ನು ಶ್ರದ್ಧೆಯಿಂದ ಉಪಾಸನೆ ಮಾಡುತ್ತ ಹೋದರೆ ತನ್ನ ಜೀವನದಲ್ಲಿ ಸಾಧಕನು ಒಂದೇ ದಿವ್ಯತೆಯ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬಹುದೆಂಬ ಸಂದೇಶವನ್ನು ದಶಮಹಾವಿದ್ಯೆಯರು ನಮಗೆ ನೀಡುತ್ತಾರೆ.

# ಸ್ವಾಮಿ ಯತೀಶ್ವರಾನಂದ – ನಾವು ಕಂಡಂತೆ

ಸ್ವಾಮಿ ಯತೀಶ್ವರಾನಂದರ ನೆನಪುಗಳಿರುವ ಈ ಆಂಗ್ಲ ಪುಸ್ತಕ ಎರಡು ಸಂಪುಟಗಳಲ್ಲಿದೆ. ಮೊದಲನೆಯ ಸಂಪುಟದಲ್ಲಿ ೭೮೨ ಹಾಗೂ ಎರಡನೆಯದರಲ್ಲಿ ೭೩೮ ಪುಟಗಳಿವೆ.

ಸ್ವಾಮಿ ಯತೀಶ್ವರಾನಂದರು ೧೮೮೯ರಲ್ಲಿ ಜನಿಸಿದರು. ಬಿ.ಎ. ಪದವಿಯ ನಂತರ ಸ್ನಾತಕೋತ್ತರ ವಿದ್ಯಾಭ್ಯಾಸವನ್ನು ಮುಂದುವರಿಸಿದರೂ, ವೈರಾಗ್ಯ ಹೊಂದಿ ೧೯೧೧ರಲ್ಲಿ ಬೇಲೂರು ಮಠ ಸೇರಿದರು. ಶ್ರೀರಾಮಕೃಷ್ಣರ ನೇರ ಶಿಷ್ಯರಲ್ಲಿ ಒಬ್ಬರಾದ ಸ್ವಾಮಿ ಬ್ರಹ್ಮಾನಂದರಿಂದ ಅವರು ಮಂತ್ರೋಪದೇಶ ಪಡೆದರು; ೧೯೧೭ರಲ್ಲಿ ಅವರಿಂದಲೇ ಸಂನ್ಯಾಸ ದೊರೆಯಿತು. ಶ್ರೀಮಾತೆ ಶಾರದಾದೇವಿಯವರ ಆಶೀರ್ವಾದ ಪಡೆದ ಅವರು ಗಿರೀಶಚಂದ್ರ ಘೋಷ್ ಮತ್ತು 'ಶ್ರೀರಾಮಕೃಷ್ಣ ವಚನವೇದ'ದ ಕರ್ತೃ ಮಾಸ್ಟರ್ ಮಹಾಶಯರ ಭೇಟಿ ಮಾಡಿದ್ದರು. ಸ್ವಾಮಿ ತುರೀಯಾನಂದರ ಸೇವೆಮಾಡುವ ಪುಣ್ಯವೂ ಅವರಿಗೆ ಲಭಿಸಿತು. 'ಪ್ರಬುದ್ಧ ಭಾರತ' ಪತ್ರಿಕೆಯ ಸಂಪಾದಕರಾಗಿದ್ದ ಅವರು, ಮುಂಬೈ, ಮದರಾಸು, ಬೆಂಗಳೂರು ಆಶ್ರಮಗಳ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ೧೯೨೮ರಲ್ಲಿ ಅವರನ್ನು ಶ್ರೀರಾಮಕೃಷ್ಣ ಮಹಾಸಂಘದ ಟ್ರಸ್ಟಿಗಳನ್ನಾಗಿ ಮಾಡಿದರು. ಹೀಗೆ ರಾಮಕೃಷ್ಣ ಮಹಾಸಂಘ ಅವರಿಗೆ ವಹಿಸಿದ ಜವಾಬ್ದಾರಿಗಳನ್ನು ಅವರು ಸಮರ್ಪಕವಾಗಿ ನಿರ್ವಹಿಸಿದರು. ಆಗ ಮಹಾಸಂಘದ ಅಧ್ಯಕ್ಷರಾಗಿದ್ದ ಸ್ವಾಮಿ ಶಿವಾನಂದರು ೧೯೩೩ರಲ್ಲಿ ಅವರನ್ನು ಯೂರೋಪ್‌ಗೆ ಕಳುಹಿಸಲು ನಿರ್ಧರಿಸಿದರು; ಭಕ್ತರಿಗೆ ಮಂತ್ರದೀಕ್ಷೆಯನ್ನು ಕೊಡುವುದಕ್ಕೆ ಅನುಮತಿಯನ್ನೂ ನೀಡಿದರು. ಸುಮಾರು ೧೭ ವರ್ಷಗಳ ಕಾಲ ಸ್ವಾಮಿ ಯತೀಶ್ವರಾನಂದರು ಯೂರೋಪಿನ ಅನೇಕ ದೇಶಗಳಲ್ಲಿ ಮತ್ತು ಅಮೆರಿಕಾದಲ್ಲಿ ವೇದಾಂತ ಮತ್ತು ಶ್ರೀರಾಮಕೃಷ್ಣರ ಬೋಧನೆಗಳನ್ನು ಪ್ರಚಾರ ಮಾಡಿದರು. ಈ ಕಾಲದಲ್ಲಿ ಅವರನ್ನು ಭೇಟಿಯಾಗಿ, ಆಧ್ಯಾತ್ಮಿಕ ತತ್ತ್ವಗಳನ್ನು ಕುರಿತು ಚರ್ಚಿಸಿ, ನಂತರ ಶ್ರೀರಾಮಕೃಷ್ಣ ಆಶ್ರಮವನ್ನು ಸೇರಿದ ಸ್ವಾಮಿ ಯೋಗೇಶಾನಂದರ ಲೇಖನ ಈ ಸಂಪುಟದಲ್ಲಿದೆ. ಇಲ್ಲಿ ಸ್ವಾಮಿ ಯತೀಶ್ವರಾನಂದರ ವ್ಯಕ್ತಿತ್ವ, ಅವರು ತಾಳ್ಮೆಯಿಂದ ಸಹನೆಯಿಂದ ಆಧ್ಯಾತ್ಮಿಕ ಪ್ರಶ್ನೆಗಳಿಗೆ ಸರಳವಾಗಿ ಉತ್ತರಿಸುವ ವಿಧಾನ ಇವನ್ನು ನಾವು ಕಾಣಬಹುದು. ಆಗಿನ ಕಾಲದ ಯೂರೋಪ್ ಮತ್ತು ಅಮೆರಿಕಾದ ಇತರ ಭಕ್ತರ ಲೇಖನಗಳೂ ಇದರಲ್ಲಿವೆ.




**Swami Yatiswarananda As We Knew Him**
Publisher: Sri Ramakrishna Math
Mylapore, chennai 600 004
Email: mail@chennaimath.org
ಪುಟ : 1550 (2 ಸಂಪುಟ ಸೇರಿ)
ಬೆಲೆ: ₹ 200

ದೀರ್ಘಕಾಲದ ನಂತರ ಸ್ವಾಮಿ ಯತೀಶ್ವರಾನಂದರು ೧೯೫೦ರಲ್ಲಿ ಭಾರತಕ್ಕೆ ಹಿಂದಿರುಗಿದರು. ಕೆಲವು ಕಾಲ ಬೇಲೂರು ಮಠದಲ್ಲಿ ಇದ್ದರು. ನಂತರ ೧೯೫೧ರಲ್ಲಿ ಬೆಂಗಳೂರಿನ ಆಶ್ರಮಕ್ಕೆ ಅಧ್ಯಕ್ಷರಾಗಿ ಬಂದರು. ಡಿಸೆಂಬರ್ ೧೯೬೫ರ ವರೆಗೂ ಆಶ್ರಮಕ್ಕೆ ದುಡಿದ ಅವರು ಅನಾರೋಗ್ಯದ ನಿಮಿತ್ತ ಬೇಲೂರು ಮಠಕ್ಕೆ ಹೋದರು. ಜನವರಿ ೧೯೬೬ರಲ್ಲಿ ಇಹಲೋಕವನ್ನು ತ್ಯಜಿಸಿದರು. ಬೆಂಗಳೂರು ರಾಮಕೃಷ್ಣ ಆಶ್ರಮಕ್ಕೆ ಬರುವುದಕ್ಕೆ ಮೊದಲೇ ಆಶ್ರಮ ಸೇರಿದ್ದ ಬ್ರಹ್ಮಚಾರಿಗಳು ಇವರಿಂದ ಮಂತ್ರ ದೀಕ್ಷೆ ಪಡೆದರು. ಅನೇಕ ಯುವಕರು ಇವರಿಂದ ಆಕರ್ಷಿತರಾಗಿ ಮಂತ್ರೋಪದೇಶ ಪಡೆದು, ಬೆಂಗಳೂರಿನ ರಾಮಕೃಷ್ಣ ಆಶ್ರಮ ಸೇರಿದರು. ವಿದ್ಯಾವಂತ ಯುವ ಸ್ತ್ರೀಭಕ್ತರು ದೀಕ್ಷೆ ಪಡೆದು ಶ್ರೀಶಾರದಾ ಮಠ ಸೇರಿದರು. ಇತರ ಅನೇಕ ಭಕ್ತರು ಉಪದೇಶ ಪಡೆದು ವಿವಿಧ ಸೇವಾ ಕಾರ್ಯಗಳನ್ನು ಪ್ರಾರಂಭಿಸಿದರು. ಅವುಗಳಲ್ಲಿ ಕೆಲವು ಇಂದಿಗೂ ಸಾಂಗವಾಗಿ ನಡೆದುಕೊಂಡು ಬರುತ್ತಿವೆ. ಈ ಕಾರಣದಿಂದಲೇ ಈ ಸ್ಮೃತಿಸಂಕಲನದಲ್ಲಿ ಕರ್ನಾಟಕದ ಸಾಧುಗಳು, ಸಾಧ್ವಿಯರು ಮತ್ತು ಭಕ್ತರ ಲೇಖನಗಳೇ ಹೆಚ್ಚಾಗಿವೆ; ಬೆಂಗಳೂರು ಆಶ್ರಮದ ಆವರಣದಲ್ಲಿ ತೆಗೆದ ಸ್ವಾಮಿಗಳ ಭಾವಚಿತ್ರಗಳು ಹೆಚ್ಚಾಗಿವೆ.

ಸ್ವಾಮಿ ಯತೀಶ್ವರಾನಂದರು ಬೆಂಗಳೂರು ಆಶ್ರಮದ ಅಧ್ಯಕ್ಷರಾದ ಎರಡು ವರ್ಷಗಳೊಳಗಾಗಿ ಅವರು ಪ್ರಾರಂಭಿಸಿದ ಮೊದಲನೆ ಕಾರ್ಯವೇ 'ವಿವೇಕಾನಂದ ಬಾಲಕ ಸಂಘ'ವನ್ನು ಶ್ರೀಶಾರದಾದೇವಿಯವರ ಜನ್ಮಶತಮಾನೋತ್ಸವ ವರ್ಷವಾದ ೧೯೫೩ರಲ್ಲಿ ಪ್ರಾರಂಭಿಸಿದುದು. ಇದು ಬಾಲಕರಿಗೆ, ಯುವಕರಿಗೆ ಶಿಸ್ತು, ಭಾರತೀಯ ಸಂಸ್ಕೃತಿ-ಧರ್ಮಗಳ ಬಗ್ಗೆ ತರಬೇತಿ ಕೊಟ್ಟಿತು; ನಾಯಕತ್ವವನ್ನು ಎಳೆಯ ವಯಸ್ಸಿನವರಿಗೆ ಕಲಿಸಿ ಕೊಟ್ಟಿತು. ಯತೀಶ್ವರಾನಂದರನ್ನು ನೋಡಲು ಬರುತ್ತಿದ್ದ ಹಿರಿಯ ಭಕ್ತರಿಗೆ ಅವರು, 'ನನಗೆ ನಿಮ್ಮ ಮೊಮ್ಮಕ್ಕಳಲ್ಲಿ ಆಸಕ್ತಿ' ಎಂದು ಹೇಳುತ್ತಿದ್ದರಂತೆ. 'ಬಾಲಕ ಸಂಘ' ಮತ್ತು 'ವಿದ್ಯಾರ್ಥಿ ಮಂದಿರ' ಸ್ವಾಮಿ ಯತೀಶ್ವರಾನಂದರು ಯುವಪೀಳಿಗೆಯ ತರಬೇತಿಗೆ ನೀಡಿದ ಕಾಣಿಕೆ.

ಅನಂತರದ ಬೃಹತ್ ಕಾರ್ಯವೇ ಶ್ರೀರಾಮಕೃಷ್ಣರ ನೂತನ ದೇವಾಲಯದ ನಿರ್ಮಾಣ. ಆಶ್ರಮ ಪ್ರಾರಂಭವಾಗಿ ೫೦ ವರ್ಷಗಳಾಗಿದ್ದರೂ ಅಲ್ಲಿನ ದೇವಸ್ಥಾನ ಮೂರು ಅಂಕಣಗಳ ಕಟ್ಟಡವಾಗಿತ್ತು. ಅದಕ್ಕೆ ಹೊಂದಿಕೊಂಡಂತೆ ಸುಂದರವಾದ ಸರಳವಾದ ಪ್ರಾರ್ಥನಾಮಂದಿರ ೧೯೫೫ರಲ್ಲಿ ಸ್ವಾಮಿ ರಾಮಕೃಷ್ಣಾನಂದರ ಜನ್ಮದಿನದಂದು ಉದ್ಘಾಟಿಸಲ್ಪಟ್ಟಿತು.

ಸ್ವಾಮಿಗಳು ಬಂಗಾಲಿಗಳು. ಅವರಿಗೆ ಕನ್ನಡ ಬರುತ್ತಿರಲಿಲ್ಲ. ಸಂಜೆಯ ಆರತಿ ಸಮಯದಲ್ಲಿ ಕನ್ನಡದ ಸ್ವಾಮಿಗಳು, ಬ್ರಹ್ಮಚಾರಿಗಳು ಬಂಗಾಲಿ ಹಾಡನ್ನು ಹಾಡಿದಾಗ ಕನ್ನಡದ ಹಾಡುಗಳನ್ನು ಹಾಡಲು ಹೇಳುತ್ತಿದ್ದರಂತೆ. ಕನ್ನಡ ಸಾಹಿತ್ಯದಲ್ಲಿ ಸರಳ ಗದ್ಯಲೇಖನಕ್ಕೆ ಹೆಸರುವಾಸಿಯಾದ ತ.ಸು.ಶಾಮರಾಯರು ಸ್ವಾಮಿ ಯತೀಶ್ವರಾನಂದರಿಂದ ದೀಕ್ಷೆ ಪಡೆದವರು. ಒಮ್ಮೆ ಯಾವುದೋ ವಿಷಯಕ್ಕೆ ಅವರು ಸ್ವಾಮಿಗಳಿಗೆ ಪತ್ರ ಬರೆದಾಗ, 'ನಿಮಗೊಂದು ಬೇರೆ ಕೆಲಸವನ್ನು ಕಾದಿರಿಸಿದ್ದೇನೆ. ಬೆಂಗಳೂರಿಗೆ ಬನ್ನಿ' ಎಂದು ಬರೆದು, ಅವರು ಬಂದಾಗ ಸಂಸ್ಕೃತ ಭಾಗವತವನ್ನು ಅವರ ಕೈಯಲ್ಲಿರಿಸಿ, ಸರಳ ಕನ್ನಡದಲ್ಲಿ ಇದನ್ನು ಸಂಗ್ರಹವಾಗಿ ಬರೆಯಿರಿ ಎಂದು ಹೇಳಿದರು. ಆಶ್ರಮದಲ್ಲಿ ಅವರಿಗಾಗಿ ಆಗಲೇ ಸಜ್ಜುಗೊಳಿಸಿದ್ದ ಕೋಣೆಯೊಂದರಲ್ಲಿ ಅವರನ್ನು ಕೆಲವು ತಿಂಗಳು ಇಟ್ಟುಕೊಂಡು, ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವಂತೆ ಆಗ ಬ್ರಹ್ಮಚಾರಿಗಳಾಗಿದ್ದ ಸ್ವಾಮಿ ಸುರೇಶಾನಂದರಿಗೆ ತಿಳಿಸಿದರಂತೆ. ಹೀಗೆ 'ವಚನಭಾಗವತ' ಕನ್ನಡಿಗರ ಕೈಸೇರಲು ಸ್ವಾಮಿ ಯತೀಶ್ವರಾನಂದರು ಕಾರಣರಾದರು.

ಸ್ವಾಮಿ ಯತೀಶ್ವರಾನಂದರು ತಮ್ಮ ಜೀವಿತದ ಕೊನೆಯ ೧೫ ವರ್ಷಗಳನ್ನು ಬೆಂಗಳೂರಿನ ಆಶ್ರಮದ, ಆಶ್ರಮವಾಸಿಗಳ ಮತ್ತು ಭಕ್ತರ ಶ್ರೇಯಸ್ಸಿಗಾಗಿ ದುಡಿದರಾದರೂ, ಅವರ ಕಾರ್ಯ ಮತ್ತು ಕಾಲ ಇದಕ್ಕೆ ಸೀಮಿತವಾಗಿರಲಿಲ್ಲ. ಎರಡು ಕೆಲಸಗಳು ಅವರ ಸಮಯ ಮತ್ತು ಆರೋಗ್ಯದ ಬಹುಭಾಗವನ್ನು ಕಬಳಿಸಿದುವು. ಹಲವು ವರ್ಷ ಅವರು ಅನೇಕ ರಾಜ್ಯಗಳಲ್ಲಿ ಮತ್ತು ಅನೇಕ ದೇಶಗಳಲ್ಲಿ ಉಪದೇಶ ನೀಡಿದುದರಿಂದ, ಅವರ ಶಿಷ್ಯರ ಸಂಖ್ಯೆ ಹೆಚ್ಚಾಗಿತ್ತು. ಅವರಿಂದ ಉಪದೇಶ ಪಡೆದವರು ಮತ್ತು ಸಾಧಕರು ಅವರಿಗೆ ಪತ್ರ ಬರೆಯುತ್ತಿದ್ದರು. ಸ್ವಾಮಿಗಳು ಎಲ್ಲ ಪತ್ರಗಳಿಗೂ ಉತ್ತರ ಬರೆಯುತ್ತಿದ್ದರು. ಈ ಕೆಲಸ ಅವರ ಸಮಯವನ್ನು ಬಹುಮಟ್ಟಿಗೆ ತೆಗೆದುಕೊಳ್ಳುತ್ತಿತ್ತು. ಎರಡನೆಯದಾಗಿ, ೧೯೬೭ರಲ್ಲಿ ಅವರನ್ನು ಶ್ರೀರಾಮಕೃಷ್ಣ ಮಹಾಸಂಘದ ಉಪಾಧ್ಯಕ್ಷರನ್ನಾಗಿ ಮಾಡಲಾಯಿತು. ಆ ಸಮಯದಲ್ಲಿ ಅಧ್ಯಕ್ಷರಾಗಿದ್ದ ಸ್ವಾಮಿ ಮಾಧವಾನಂದರ ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ. ಅವರು ಚಿಕಿತ್ಸೆಗಾಗಿ ಅಮೆರಿಕಾಗೆ ಹೋಗಬೇಕಾಯಿತು. ಸ್ವಾಮಿ ಯತೀಶ್ವರಾನಂದರು ಮಂತ್ರೋಪದೇಶ ಕೊಡುವುದಕ್ಕಾಗಿ ಅನೇಕ ಸ್ಥಳಗಳಿಗೆ ದೇಶಾದ್ಯಂತ ಪ್ರಯಾಣ ಮಾಡುತ್ತಿದ್ದರು. ಅವರು ಸಂಘದ ಹಿರಿಯ ಯತಿಗಳಾದುದರಿಂದ ಸುತ್ತಮುತ್ತಲಿನ ರಾಜ್ಯಗಳಲ್ಲಿ ನಡೆದ ಮುಖ್ಯ ಉತ್ಸವಗಳಿಗೆ, ಸಮಾರಂಭಗಳಿಗೆ ಹೋಗಬೇಕಾಗುತ್ತಿತ್ತು. ವಯಸ್ಸಾಗುತ್ತಿದ್ದಂತೆ ಅವರ ಆರೋಗ್ಯ ಇಳಿಮುಖವಾಗುತ್ತಿತ್ತು; ಪ್ರಯಾಣದ ಅನಾನುಕೂಲ, ಪ್ರಯಾಸಗಳನ್ನು ಸಹಿಸಲು ಕಷ್ಟವಾಗತೊಡಗಿತು. ಇವೆಲ್ಲದರ ಮಧ್ಯೆ ಬೆಂಗಳೂರು ಆಶ್ರಮದ ಬೆಳವಣಿಗೆಗಾಗಿ ಅವರು ಅಷ್ಟೊಂದು ಕೆಲಸ ಮಾಡಿದರು.

ಈ ಸ್ಮರಣಗ್ರಂಥದ ಮೊದಲ ಸಂಪುಟದಲ್ಲಿ ಇರುವ ೬೬ ಲೇಖನಗಳಲ್ಲಿ ಮುಕ್ಕಾಲು ಭಾಗ ಸಾಧುಗಳಿಂದ ಬರೆಯಲ್ಪಟ್ಟಿವೆ; ಉಳಿದವು ಭಕ್ತರ ಲೇಖನಗಳು. ಎರಡನೆ ಸಂಪುಟದಲ್ಲಿ ಇರುವ ೭೩ ಲೇಖನಗಳು ಭಕ್ತರಿಂದ ಬರೆಯಲ್ಪಟ್ಟಿವೆ. ಸ್ವಾಮಿಗಳ ಲೇಖನ ಮತ್ತು ಪತ್ರಗಳನ್ನು ಎರಡನೆ ಸಂಪುಟದಲ್ಲಿ ನೋಡಬಹುದು. ಈ ಪುಸ್ತಕಗಳಲ್ಲಿ ಸುಮಾರು ೨೦೦ ಭಾವಚಿತ್ರಗಳಿವೆ. ಬಹುಶಃ ಯಾವ ಸ್ಮೃತಿ ಸಂಪುಟಗಳಲ್ಲೂ ಇಷ್ಟೊಂದು ಚಿತ್ರಗಳು ಕಾಣಬರುವುದಿಲ್ಲ. ಭಕ್ತರಿಗೆ ಆಕರ್ಷಕವಾದ ಮತ್ತೊಂದು ವಿಷಯವೆಂದರೆ, ಸ್ವಾಮಿ ಯತೀಶ್ವರಾನಂದರ ಪ್ರವಚನಗಳ ಧ್ವನಿಮುದ್ರಿಕೆ (ಸಿ.ಡಿ.) ಕೂಡ ಈ ಸಂಪುಟಗಳೊಂದಿಗೆ ಲಭ್ಯವಿದೆ.

ಸ್ವಾಮಿ ಯತೀಶ್ವರಾನಂದರು ಭಾಷಣಕ್ಕೆ ಹೆಸರಾದವರಲ್ಲ. ಹಿತವಾಗಿ ಮಿತವಾಗಿ ಸರಳ ಭಾಷೆಯಲ್ಲಿ ಆಲೋಚಿಸಿ, ನಿಧಾನವಾಗಿ ಮಾತನಾಡುತ್ತಿದ್ದರು. ಈ ಶೈಲಿ ಆಧ್ಯಾತ್ಮಿಕ ಪ್ರವಚನಗಳಿಗೆ ಸಹಾಯಕಾರಿ. ಪೂರ್ವಭಾವಿಯಾಗಿ ಪ್ರವಚನದ ವಿಷಯಗಳನ್ನು ವಿವರವಾಗಿ ಬರೆದಿಡುತ್ತಿದ್ದರು. ಅವುಗಳ ಸಂಕಲನವೇ 'ಧ್ಯಾನ ಮತ್ತು ಆಧ್ಯಾತ್ಮಿಕ ಜೀವನ' ಎಂಬ ಪುಸ್ತಕ.

ಸಾಧುಗಳು ಬರೆದಿರುವ ಎಲ್ಲ ಲೇಖನಗಳಲ್ಲೂ ಕಾಣುವ ಅಂಶವೆಂದರೆ ಸ್ವಾಮಿಗಳ ಶಿಸ್ತಿನ ಕ್ರಮಬದ್ಧವಾದ, ಗಡಿಬಿಡಿ ಇಲ್ಲದ ಜೀವನ, ಶ್ರೀರಾಮಕೃಷ್ಣರಲ್ಲಿ ನಿರ್ಭರತೆ ಮತ್ತು ಸಂಘಜೀವನದಲ್ಲಿ ಸಾಮರಸ್ಯ. 'ಸಂಘ ಕೊಡುವ ಕೆಲಸವನ್ನು ಶ್ರದ್ಧೆಯಿಂದ ಮಾಡಿ. ನಿಮಗೆ ಯಾವ ಸಮಸ್ಯೆ ಇದ್ದರೂ, ಪರಿಹಾರಕ್ಕಾಗಿ ಶ್ರೀರಾಮಕೃಷ್ಣರನ್ನು ಪ್ರಾರ್ಥಿಸಿ. ಎಲ್ಲ ಕೆಲಸ ಕಾರ್ಯಗಳೂ ಅವರ ಇಚ್ಛೆಯಂತೆ ನಡೆಯುವುವು. ಅವರು ನಿಮ್ಮ ಸಮಸ್ಯೆಗಳನ್ನು ಪರಿಹರಿಸುವರು' ಎಂದು ಅವರು ಸಾಧುಗಳಿಗೆ ಹೇಳುತ್ತಿದ್ದರಂತೆ.

ಅವರ ವ್ಯಕ್ತಿತ್ವದ ಆಧಾರವೆಂದರೆ ಶ್ರೀರಾಮಕೃಷ್ಣರಲ್ಲಿ ಅವರಿಗೆ ಇದ್ದ ಅನನ್ಯ ಭಕ್ತಿ ಮತ್ತು ಅವರ ಗುರುಗಳಾದ ಸ್ವಾಮಿ ಬ್ರಹ್ಮಾನಂದರ ಉಪದೇಶದಲ್ಲಿ ಅವರಿಗಿದ್ದ ಅಚಲ ನಿಷ್ಠೆ. ಸ್ವಾಮಿ ಬ್ರಹ್ಮಾನಂದರು ಅವರಿಗೆ ಕೊಟ್ಟ ಮೂರು ಸಲಹೆಗಳನ್ನು ಅವರ ಜೀವನ ಪರ್ಯಂತ ಒಂದು ದಿನವೂ ತಪ್ಪಿಸದೆ ಮಾಡುತ್ತಿದ್ದರು – ಮಧ್ಯರಾತ್ರಿಯಲ್ಲಿ ಭಗವನ್ನಾಮ ಜಪದ ಪುರಶ್ಚರಣೆ, ಬೆಳಗ್ಗೆ ವ್ಯಾಯಾಮ, ಮತ್ತು ಅವರಿಗೆ ತಿಳಿದ ವಿಷಯವನ್ನು ಬರೆಯುವುದು. ಈ ಪುಸ್ತಕವನ್ನು ಓದಿದಾಗ ನಮ್ಮ ಮನಸ್ಸು, ಇಂತಹ ಮಹಾಚೇತನವನ್ನು ಕುರಿತ ಅಮೂಲ್ಯ ಆಧ್ಯಾತ್ಮಿಕ ಪುಣ್ಯಸ್ಮರಣೆಯೊಂದಿಗೆ ಅಂದಿನ ಲೋಕಕ್ಕೆ ಜಾರುತ್ತ ಧನ್ಯತೆಯನ್ನು ಪಡೆಯುವುದು.

*–ಡಾ. ಇ. ವಸಂತಕುಮಾರ್*




### ದ್ವಾದಶ ಸ್ಕಂಧ

## ಶ್ರೀಕೃಷ್ಣನ ನಂತರದ ಭಾರತ

ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದಾಗ ಭೂಮಿಯಲ್ಲಿನ ರಾಜಕಾರಣ ಮತ್ತು ರಾಜನೀತಿಗಳು ದುರ್ಬಲಗೊಳ್ಳತೊಡಗಿದವು. ಅವು ಅವಸಾನದತ್ತ ಮುಖಮಾಡಿದವು. ಎಲ್ಲ ಕ್ಷೇತ್ರಗಳಲ್ಲೂ ಅಧರ್ಮ ಮತ್ತು ಅಸತ್ಯಗಳೇ ರಾಜಪಟ್ಟಕ್ಕೆ ಅರ್ಹವೆನಿಸಿದವು. ಧರ್ಮದ ಭೀತಿಯಿಲ್ಲದೆ ಜನರು ಔದಾರ್ಯರಹಿತರಾಗಿ, ಶೀಘ್ರಕೋಪಿಗಳಾಗಿ, ಸ್ತ್ರೀಹತ್ಯೆ, ಶಿಶುಹತ್ಯೆ, ಗೋಹತ್ಯೆಗಳು ನಿರಂತರ ನಡೆದವು. ಪರಸ್ತ್ರೀ, ಪರದ್ರವ್ಯಗಳ ಅಪಹರಣಕಾರರು ಮತ್ತು ಮ್ಲೇಚ್ಛರು ಅಧಿಕಾರ ಸೂತ್ರವನ್ನು ಕೈಗೆತ್ತಿಕೊಳ್ಳತೊಡಗಿದರು.

ಇಂತಹ ಪರಿಸ್ಥಿತಿಯಲ್ಲಿ ಕ್ರಮೇಣ ಜನತೆಯ ಜೀವನವು ಕ್ಲಪ್ತವಾಗುತ್ತದೆ. ಜನಜೀವನ ಸಂಸ್ಕೃತಿಯಿಂದ ವಿಕೃತಿಯೆಡೆಗೆ ವಾಲುತ್ತದೆ. ರಾಜನಂತೆಯೇ ಪ್ರಜೆಗಳು ಕೆಡುಕಿನಿಂದ ಪ್ರಭಾವಿತರಾಗಿ ಜನಜೀವನ ನಡೆಸುತ್ತಾರೆ. ಜನರು ಮಾನವೀಯತೆಯನ್ನು ಮರೆತು ಪಶುವಿನ ರೀತಿಯಲ್ಲಿ ನಡೆಯತೊಡಗುತ್ತಾರೆ. ಕ್ರಯ ಮತ್ತು ವಿಕ್ರಯಗಳಲ್ಲಿ ನ್ಯಾಯಕ್ಕಿಂತ ವಂಚನೆಗಳಿಗೆ ಮೊದಲ ಪ್ರಾಶಸ್ತ್ಯವಿರುತ್ತದೆ. ಬ್ರಾಹ್ಮಣರು ಧರಿಸುವ ಜನಿವಾರ ಮತ್ತು ವಿಭೂತಿ, ನಾಮ, ಮುದ್ರೆಗಳೇ ಬ್ರಾಹ್ಮಣ್ಯದ ಸಂಕೇತವಾಗುತ್ತದೆ; ಅಂಥವರೇ ಸಮಾಜದಲ್ಲಿ ಪಂಡಿತರೆನ್ನಿಸಿಕೊಳ್ಳುತ್ತಾರೆ. ವೇದಗಳು, ಉಪನಿಷತ್ತುಗಳು, ಇನ್ನಿತರ ವಿದ್ಯಾರ್ಜನೆಯು ವ್ಯಾಪಾರವಾಗುತ್ತದೆ. ವಿದ್ಯೆ ಸಮಾಜದ ಮೌಲ್ಯ, ಪರಂಪರೆಗೆ ನಾಂದಿಯಾಗಬೇಕಿತ್ತು, ಅದೇ ಈಗ ಮಾರಾಟದ ಸರಕಾಗುತ್ತದೆ. ನೈತಿಕ ತಳಹದಿಯನ್ನು ನಿರ್ಮಿಸಿ, ಸಮಾಜದಲ್ಲಿನ ಸಂಸ್ಕೃತಿಯನ್ನು ಭದ್ರಪಡಿಸಬೇಕಾದ ಸಂನ್ಯಾಸಿಗಳು ಸ್ವಾರ್ಥಿಗಳಾಗಿ, ಕೇವಲ ದ್ರವ್ಯಸಂಗ್ರಹಕ್ಕಾಗಿಯೇ ಆಶ್ರಮಗಳು ಸಮಾಜದಲ್ಲಿ ಕಾಣಿಸುತ್ತವೆ. ಕಡೆಯಲ್ಲಿ ನ್ಯಾಯದಾನವೂ ಕೂಡ ಹಣದ ಪ್ರಭಾವಕ್ಕೆ ಒಳಗಾಗಿ ನೈತಿಕತೆಯ ಮಟ್ಟ ಸಂಪೂರ್ಣವಾಗಿ ಕುಸಿಯುತ್ತದೆ.

ಯಾವ ನೈತಿಕತೆಯೂ ಇಲ್ಲದೆ ಯಾರು ಬಲಿಷ್ಠರಾಗಿರುತ್ತಾರೋ, ಅವರೇ ರಾಜರಾಗುತ್ತಾರೆ. ಇಂತಹವರು ದಯಾಶೂನ್ಯರಾಗಿಯೂ, ಚೋರಸ್ವಭಾವದವರೂ ಆಗಿದ್ದು, ಪ್ರಜೆಗಳ ಧನ, ಮನ, ಪ್ರಾಣಗಳನ್ನು ಹಾನಿ ಮಾಡುತ್ತಾರೆ, ಅದಕ್ಕೆ ಬೆಂಬಲವಾಗಿರುತ್ತಾರೆ. ಇಂತಹ ರಾಜ್ಯಭಾರವನ್ನು ತಾಳಲಾರದೆ ಸಾತ್ವಿಕರು ಸರ್ವಸ್ವವನ್ನೂ ಬಿಟ್ಟು, ಅರಣ್ಯದ ವಶವಾಗಿ, ಅಲ್ಲೂ ಆಹಾರಾದಿಗಳು ಸಿಗದೆ ನೆಮ್ಮದಿ ಇಲ್ಲದ ಜೀವನ ಸಾಗಿಸುತ್ತಾ ಅಸುನೀಗುವರು.

ಕಲಿಯುಗದಲ್ಲಿ ಕಲಿಯ ಆಕ್ರಮಣಕಾರಿ ನೀತಿ ಹೆಚ್ಚಿದಂತೆಲ್ಲಾ ಸಮಾಜವು ಸಂಪೂರ್ಣ ಅಧಃಪತನ ಹೊಂದುತ್ತದೆ. ಧರ್ಮರಕ್ಷಣೆಗಾಗಿ, ಸಾತ್ವಿಕರ ಸಂರಕ್ಷಣೆಗಾಗಿ ಭಗವಂತನು ಶಂಬಲ ಎಂಬ ಗ್ರಾಮದಲ್ಲಿ, ವಿಷ್ಣುಯಶನೆಂಬ ಸಾತ್ವಿಕನ ಗೃಹದಲ್ಲಿ ಕಲ್ಕಿ ಎಂಬ ಹೆಸರಿನಿಂದ ಜನಿಸುತ್ತಾನೆ. ಧರ್ಮರಕ್ಷಣೆಗಾಗಿಯೇ ಅವತರಿಸುವ ಆ ಮಂಗಳ ಮೂರ್ತಿಯು ತನ್ನಲ್ಲಿನ ಶೌರ್ಯ, ಧೈರ್ಯ ಮುಂತಾದ ವೀರೋಚಿತ ಸದ್ಗುಣಗಳಿಂದ ಕೂಡಿರುತ್ತಾನೆ. ಅನುಪಮ ದಿವ್ಯ ತೇಜಸ್ಸು ಆತನಲ್ಲಿರುವುದನ್ನು ಜನಸಾಮಾನ್ಯರು ಗಮನಿಸುತ್ತಾರೆ. ಆ ಮಂಗಳಕರನು ದೇವದತ್ತವೆಂಬ ಅಶ್ವವನ್ನೇರಿ ತನ್ನ ಖಡ್ಗದಿಂದ ಭೂಮಿಯಲ್ಲಿನ ಎಲ್ಲ ವರ್ಗದ ಜನರಲ್ಲೂ ಇರುವ ಪ್ರಜಾಪೀಡಕರನ್ನು, ಸಮಾಜ ದ್ರೋಹಿಗಳನ್ನು ಸಂಹರಿಸುವನು.

ದುರುಳರೆಲ್ಲಾ ನಾಶವಾದ ಮೇಲೆ ಆ ಕಲ್ಕಿ ಪರಮಾತ್ಮನ ದೇಹದಿಂದ ಸುಗಂಧ ಪರಿಮಳವು ಹೊರಬಂದು, ಇಡೀ ವಾತಾವರಣವನ್ನೇ ವ್ಯಾಪಿಸಿ, ಎಲ್ಲವನ್ನೂ ಪವಿತ್ರಗೊಳಿಸುತ್ತದೆ. ಇದರಿಂದ ಪುನಃ ಜನರಲ್ಲಿ ಭಯ-ಭಕ್ತಿ, ವೈರಾಗ್ಯ ಮೂಡುತ್ತದೆ. ಈ ಕಲ್ಕಿ ಅವತಾರದೊಂದಿಗೆ, ಚಂದ್ರ ಸೂರ್ಯ ಮತ್ತು ಬೃಹಸ್ಪತಿ ಗ್ರಹಗಳು ಪುಷ್ಯ ನಕ್ಷತ್ರದ ಏಕರಾಶಿಯಲ್ಲಿ ಬರುವವು. ಇದರ ಸಂಯೋಗವೇ ಕೃತಯುಗದ ಪ್ರಾರಂಭವೆಂದು ತಿಳಿಯಬಹುದಾಗಿದೆ.

**ಶ್ರೀಕೃಷ್ಣನ ನಂತರ ರಾಜವಂಶದ ಪರಂಪರೆ:** ಪರೀಕ್ಷಿತ ರಾಜ, ಜನಮೇಜಯ, ನಂತರ ಮಾರ್ಜಾರಿ ರಾಜವಂಶದವರಿಂದ ಪ್ರಾರಂಭವಾದ ಆಡಳಿತ ಮುಂದೆ ಪುರಂಜಯ, ಪ್ರದ್ಯೂತ, ಅಲಕ, ವಿಷಾಕಯುಪ, ರಾಜಕ, ನಂದಿವರ್ಧನ, ಶಿಶುನಾಕ, ಕಾಕವರ್ಣ, ಮಹಾನಂದಿ ಇವರುಗಳ ಪರಂಪರೆಯಾಗಿ ಮುಂದುವರಿಯುತ್ತದೆ. ಮಹಾನಂದಿಗೆ ಶೂದ್ರಸ್ತ್ರೀಯಲ್ಲಿ ನಂದನೆಂಬ ಮಗನು ಜನಿಸುವನು. ಇವನು ಪರಶುರಾಮ ನಂತೆ ಮಹಾಪರಾಕ್ರಮಿಯಾಗಿದ್ದು, ಬಲಾಢ್ಯ ಸೈನ್ಯವನ್ನು ಕಟ್ಟಿ ಏಕಚಕ್ರಾಧಿಪತಿಯಾಗುವನು. ಅವನ ಮಕ್ಕಳು ಎಂಟು ಮಂದಿ ಸೇರಿ ನವನಂದರೆಂದೇ ಪ್ರಸಿದ್ಧರಾಗುವರು. ಕೊನೆಯ ನಂದನ ರಾಜ್ಯದಲ್ಲಿ ದುರಾಡಳಿತ ಹೆಚ್ಚಾಗಿ ಪ್ರಜೆಗಳು ಹೀನಾಯ ಸ್ಥಿತಿ ತಲುಪುತ್ತಾರೆ. ಗಡಿಯಾಚೆಗಿನ ಮ್ಲೇಚ್ಛರ ದಾಳಿಯಿಂದ ಆಡಳಿತ ಮತ್ತಷ್ಟು ಹದಗೆಡುತ್ತದೆ. ಇಂತಹ ಸಮಯದಲ್ಲಿ ಕೌಟಿಲ್ಯ ಮತ್ತು ಇವನನ್ನು ಆಶ್ರಯಿಸುವ ಚಂದ್ರಗುಪ್ತ ಮೌರ್ಯರ ಒಗ್ಗೂಡುವಿಕೆಯಿಂದಾಗಿ ದುಷ್ಟನಾದ ನಂದ ರಾಜನು ಹತನಾಗುತ್ತಾನೆ. ನಂತರ ರಾಜನಾದ ಚಂದ್ರಗುಪ್ತನು ಮಹಾರಾಜನಾಗಿ ದೇಶವನ್ನು ಸಂರಕ್ಷಿಸಿ, ಗಡಿಯಾಚೆಗಿನ ಶತ್ರುಗಳನ್ನು ನಿಗ್ರಹಿಸುತ್ತಾನೆ. ಚಂದ್ರಗುಪ್ತನು ಮುರಾ ಎಂಬ ಶೂದ್ರಕನ್ಯೆಯಲ್ಲಿ ನಂದರಾಜನಿಗೆ ಜನಿಸಿದ ಮಗನಾಗಿರುತ್ತಾನೆ. ನಂತರ ಅಶೋಕವರ್ಧನ, ಶತಧನ್ವ, ಬೃಹದ್ರಥ, ಪುಷ್ಯಮಿತ್ರ – ಹೀಗೆ ರಾಜಪರಂಪರೆ ಮುಂದುವರೆಯುತ್ತದೆ.

ಈ ರಾಜರ ಪರಂಪರೆಯಲ್ಲಿ ರಾಜ್ಯದ ವಿಸ್ತಾರ, ಆಕ್ರಮಣ ನೀತಿಗಳಿಂದಾಗಿ ಕೊಲೆ, ಸುಲಿಗೆ, ಅತ್ಯಾಚಾರ ಎಲ್ಲವೂ ನಡೆಯುತ್ತದೆ. ಎಷ್ಟೋ ಮಂದಿ ಸಾತ್ವಿಕ, ರಾಜಸ ಮತ್ತು ತಾಮಸ ರಾಜರು ಆಡಳಿತ ಮಾಡಿ 'ಈ ಭೂಮಿ ನನ್ನದು, ತನ್ನದು' ಎಂದುಕೊಂಡು ಶಾಸನ ಬರೆಸಿ, ಸ್ವಾಮ್ಯಕ್ಕೆ ಒಳಪಡಿಸಿಕೊಂಡಿದ್ದರೂ, ಅದು ಅಶಾಶ್ವತ ಎಂಬ ಸತ್ಯಕ್ಕೆ ಕುರುಡಾಗುತ್ತಾರೆ. ಮರಣದ ಬಳಿಕ ಭೂಮಿಯೇನೂ ಅವರ ಹಿಂದೆ ಹೋಗುವುದಿಲ್ಲ. ಇದು ಸ್ಪಷ್ಟವಾಗಿದ್ದರೂ, ಅವರಿಗಿರುವ ಭೂವ್ಯಾಮೋಹವನ್ನು ಕಂಡು ಭೂದೇವಿಯು ಅವರ ಅಜ್ಞಾನಕ್ಕೆ ಮರುಗುತ್ತಾಳೆ.

**ಕಲಿದೋಷ ನಿವೃತ್ತಿಯ ಉಪಾಯ:** ಧರ್ಮ ಮತ್ತು ಅದರ ಆಚರಣೆಗಳು ಯುಗಧರ್ಮವನ್ನು ಆಧರಿಸಿದೆ. ಈ ಆಧಾರಕ್ಕೆ ಮೂಲಾಧಾರವೇ ಸತ್ವಗುಣ, ರಜೋಗುಣ ಮತ್ತು ತಮೋಗುಣಗಳು. ಸತ್ಯಯುಗದಲ್ಲಿ ಧರ್ಮವು ನಾಲ್ಕು ಪಾದಗಳಲ್ಲಿ ನೆಲೆಸಿರುತ್ತದೆ. ಏಕೆಂದರೆ ಅಲ್ಲಿ ರಜೋಗುಣ ಮತ್ತು ತಮೋಗುಣಗಳಿಗಿಂತ ಸಾತ್ವಿಕ ಗುಣವೇ ಪ್ರಧಾನ ವಾಗಿರುತ್ತದೆ. ಹಾಗಾಗಿ ಆ ಕಾಲದಲ್ಲಿನ ಜನರು ಸತ್ಯ, ನ್ಯಾಯ, ಆತ್ಮಾನುಸಂಧಾನದಲ್ಲೇ ಧನ್ಯತೆಯನ್ನು ಕಾಣುತ್ತಾರೆ.

ತ್ರೇತಾಯುಗದಲ್ಲಿ ಧರ್ಮವು ಮೂರು ಪಾದಗಳ ಮೇಲೆ ನಿಂತಿರುತ್ತದೆ. ಸಾತ್ವಿಕ, ರಾಜಸ, ತಾಮಸ ಗುಣಗಳಲ್ಲಿ ಸ್ವಲ್ಪ ವ್ಯತ್ಯಯ ಕಂಡುಬರುತ್ತದೆ. ಆದ್ದರಿಂದ ಅಸಂತೋಷ, ಅಹಂಭಾವ ಮತ್ತು ದ್ರೋಹಗಳು ಸ್ವಲ್ಪ ಹೆಚ್ಚಾಗಿರುತ್ತದೆ. ಈ ಯುಗದಲ್ಲಿನ ಜನರು ಕರ್ಮನಿಷ್ಠೆಯುಳ್ಳವರಾಗಿದ್ದು, ಪ್ರಾಣಿಹಿಂಸೆಯು ಮಿತಿಯಲ್ಲಿರುತ್ತದೆ.

ದ್ವಾಪರಯುಗದಲ್ಲಿ ಧರ್ಮವು ಎರಡೇ ಪಾದಗಳಿಗೆ ಸೀಮಿತವಾಗಿರುತ್ತದೆ. ಸಾತ್ವಿಕ ಗುಣದ ಸ್ವಭಾವ ತಗ್ಗ ತೊಡಗುತ್ತದೆ. ರಜೋಗುಣ ಮತ್ತು ತಮೋಗುಣಗಳಿಗೆ ಪ್ರಾಧಾನ್ಯವಿರುತ್ತದೆ. ಬ್ರಾಹ್ಮಣರಿಗೆ ಮತ್ತು ಕ್ಷತ್ರಿಯರಿಗೆ ಹೆಚ್ಚಿನ ಪ್ರಾಧಾನ್ಯತೆ ಸಿಗುತ್ತದೆ. ಈ ಯುಗದ ಜನರು ಯಜ್ಞಕಾರ್ಯ ಗಳಲ್ಲಿ ನಿರತರಾದರೂ ಕುಟುಂಬಜೀವನವೇ ಹೆಮ್ಮೆಯ ಮತ್ತು ಶ್ರೇಷ್ಠವಾದ ಜೀವನವೆಂದು ತಿಳಿಯುತ್ತಾರೆ.

ಕಲಿಯುಗದಲ್ಲಿ ಧರ್ಮವು ಕೇವಲ ಒಂದೇ ಪಾದದ ಮೇಲೆ ನಿಂತಿರುತ್ತದೆ. ಸಾತ್ವಿಕ ಮತ್ತು ರಜೋಗುಣಗಳು ಕಡಿಮೆಯಾಗಿ, ತಮೋಗುಣವೇ ಪ್ರಾಧಾನ್ಯ ಪಡೆಯುತ್ತದೆ. ಕಲಿಯುಗದ ಜನರಲ್ಲಿ ಮಾಯೆ, ಸೋಮಾರಿತನ ಮತ್ತು ಆಲಸ್ಯಗಳಿಂದಾಗಿ ವಿವೇಕ ಕಡಿಮೆಯಾಗಿರುತ್ತದೆ. ಹಿಂಸಾಪ್ರವೃತ್ತಿಯು ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತದೆ. ರಾಜರು, ರಾಜ್ಯದ ಅಧಿಪತಿಗಳು ಪ್ರಜೆಗಳಿಂದ ಸುಲಿಯುವ ಕಾರ್ಯವನ್ನು ವ್ಯವಸ್ಥಿತವಾಗಿ ಮಾಡುತ್ತಾರೆ. ಪ್ರಜೆಗಳಂತೂ ಅನಾರೋಗ್ಯಪೀಡಿತರಾಗಿಯೂ, ಸುಖಜೀವನದಿಂದ ವಂಚಿತರಾಗಿಯೂ ಇರುತ್ತಾರೆ. ಜ್ಞಾನ, ಭಕ್ತಿ, ವೈರಾಗ್ಯಗಳು ಜನಜೀವನದಲ್ಲಿ ಮಾಯವಾಗಿ ಕೇವಲ ಸ್ವಪ್ರತಿಷ್ಠೆಗಾಗಿ ಅಥವಾ ಹೆಸರಿಗಾಗಿ ಯಜ್ಞಯಾಗಾದಿ, ಪೂಜೆ-ಪುನಸ್ಕಾರಗಳನ್ನು ಮಾಡುತ್ತಾರೆ.

ಸಾತ್ವಿಕರು, ಸಜ್ಜನರು ಸಂಸಾರದಿಂದ, ಸುತ್ತ ಕವಿದಿರುವ ಅಧರ್ಮ ಪ್ರವೃತ್ತಿಯಿಂದ ಪಾರಾಗಬೇಕಾದರೆ ಪರಮ ದಯಾಳುವಾದ ಶ್ರೀಮನ್ನಾರಾಯಣನ ಸ್ಮರಣೆ, ಧ್ಯಾನ ಇವನ್ನು ಮಾಡಬೇಕು. ಶ್ರೀಮದ್ಭಾಗವತವು ಯಾವಾಗಲೂ ಶ್ರೀಮನ್ನಾರಾಯಣನ ಸ್ಮರಣೆಯ ಮಹಿಮೆಯ ಕಥೆಗಳನ್ನು ಮತ್ತು ಆತನ ಭಕ್ತರ ಚರಿತ್ರೆಗಳನ್ನು ಒಳಗೊಂಡಿರುವುದರಿಂದ, ನಾವು ಯಾವಾಗಲೂ ಅದರ ಅಧ್ಯಯನ, ಶ್ರವಣ ಮತ್ತು ಮನನಗಳಿಂದ ಸನ್ಮಾರ್ಗದಲ್ಲಿ ನಡೆದು, ಮುಕ್ತಿಯನ್ನು ಪಡೆಯಬಹುದು.

**ಪರೀಕ್ಷಿದ್ರಾಜನ ಮುಕ್ತಿ** : ಶ್ರಮಿಕ ಋಷಿಯ ಪುತ್ರ ಶೃಂಗಿಯ ಶಾಪಕ್ಕೆ ಒಳಗಾದ ಪರೀಕ್ಷಿದ್ರಾಜನಿಗೆ ಶುಕಮುನಿಗಳು ಭಾಗವತ ಶ್ರವಣವನ್ನು ಮಾಡುತ್ತಾ ಏಳು ದಿನಗಳು ಕಳೆದವು. ಶುಕಮುನಿಗಳು ಆತನ ಕೋರಿಕೆಯಂತೆ ಶ್ರೀಮದ್ಭಾಗವತವನ್ನು ಪ್ರವಚನ ಮಾಡಿ ಮುಗಿಸಿದ ಬಳಿಕ ಅಲ್ಲಿಂದ ತೆರಳಲು ರಾಜನ ಅನುಮತಿಯನ್ನು ಕೇಳಿದರು. ಪರೀಕ್ಷಿತನು ಶುಕಾಚಾರ್ಯರಿಗೆ ನಮಸ್ಕರಿಸಿ, "ಗುರುಗಳೇ, ನಿಮ್ಮ ಈ ಭಾಗವತ ಶ್ರವಣದಿಂದಾಗಿ ಈಗ ನನಗೆ ಮರಣಭಯವಿಲ್ಲ. ನನಗೆ ತಕ್ಷಕನೆಂಬ ಸರ್ಪ ಬಂದು ಕಚ್ಚಲಿ. ನಾನು ಈಗ ನಿಮ್ಮ ಅಪ್ಪಣೆ ಮತ್ತು ಮಾರ್ಗದರ್ಶನದಂತೆ ಭಗವಂತನ ಸ್ಮರಣೆಯಲ್ಲಿ ಧ್ಯಾನಾಸಕ್ತನಾಗುವೆನು" ಎಂದು ಹೇಳಿ ಭಗವಂತನ ಧ್ಯಾನದಲ್ಲಿ ಮುಳುಗಿದನು. ಅಲ್ಲಿದ್ದ ಎಲ್ಲ ಋಷಿಗಳೂ ಸಾಧುಗಳೂ ರಾಜನನ್ನು ಹರಸಿ, ಅಲ್ಲಿಂದ ತೆರಳಿದರು. ಪರೀಕ್ಷಿದ್ರಾಜನು ಧ್ಯಾನ ಮಾಡುತ್ತಾ ಬ್ರಹ್ಮಸ್ವರೂಪವನ್ನು ಪಡೆದನು. ಗುಪ್ತವೇಷದಲ್ಲಿ ಸರ್ಪರೂಪಿಯಾಗಿ ಬಂದ ತಕ್ಷಕನು ಪರೀಕ್ಷಿತನನ್ನು ಕಚ್ಚಿದನು. ರಾಜನ ದೇಹ ಸುಟ್ಟು ಬೂದಿಯಾಯಿತು.

ಇದನ್ನೆಲ್ಲಾ ನೋಡುತ್ತ ನಿಂತಿದ್ದ ಪರೀಕ್ಷಿದ್ರಾಜನ ಹಿರಿಯ ಮಗ ಜನಮೇಜಯನು ತನ್ನ ತಂದೆಯನ್ನು ಕಚ್ಚಿದ ತಕ್ಷಕ ಮತ್ತು ಆತನ ಸರ್ಪಕುಲವನ್ನೆಲ್ಲಾ ನಾಶಮಾಡುವುದಾಗಿ ನಿರ್ಧರಿಸಿದನು. ಇದಕ್ಕಾಗಿ ಸರ್ಪಯಾಗವನ್ನು ಮಾಡತೊಡಗಿದನು. ಲೋಕದಲ್ಲಿನ ಸರ್ಪಗಳೆಲ್ಲಾ ಸುಡುಸುಡು ಅಗ್ನಿಯಲ್ಲಿ ಬಿದ್ದು, ಸುಟ್ಟು ಕರಕಲಾಗತೊಡಗಿದವು. ತಕ್ಷಕನು ಮಾತ್ರ ಬರಲಿಲ್ಲ. ಏಕೆಂದರೆ ಅವನು ಇಂದ್ರನ ರಕ್ಷಣೆಯಲ್ಲಿದ್ದನು. ಇದನ್ನು ತಿಳಿದ ಜನಮೇಜಯನು, "ಋಷಿಗಳೇ, ಪಾಪಿಯಾದ ತಕ್ಷಕನಿಗೆ ರಕ್ಷಣೆ ನೀಡಿದ ಇಂದ್ರನ ಸಮೇತ ಅವನನ್ನು ಯಜ್ಞಕುಂಡಕ್ಕೆ ಆಹ್ವಾನಿಸಿ" ಎಂದನು. ಋಷಿಗಳು ಮಂತ್ರ ಪಠಿಸುತ್ತಿದ್ದಂತೆಯೇ ಇಂದ್ರನ ಸಿಂಹಾಸನದಲ್ಲಿ ಅಡಗಿದ್ದ ತಕ್ಷಕನು ಇಂದ್ರನ ಜೊತೆಯಲ್ಲಿ ಜನಮೇಜಯನು ನಡೆಸುತ್ತಿದ್ದ ಯಜ್ಞಕುಂಡದತ್ತ ಧಾವಿಸಿ ಬರತೊಡಗಿದನು.

ಅಷ್ಟರಲ್ಲಿ ದೇವತೆಗಳ ಪುರೋಹಿತರಾದ ಬೃಹಸ್ಪತಿಗಳು ಜನಮೇಜಯನಲ್ಲಿಗೆ ಬಂದು, ಯಾಗವನ್ನು ನಿಲ್ಲಿಸಿದರು. ಜನಮೇಜಯನಿಗೆ, "ಜನನ ಮತ್ತು ಮರಣಗಳು ಜೀವನದ ಎರಡು ಘಟ್ಟಗಳು. ಜನನದ ಹಿಂದೆಯೇ ಮರಣವು ನಿಶ್ಚಿತವಾಗಿರುತ್ತದೆ. ಅದಕ್ಕೆ ಯಾರೂ ಹೊರತಾಗಿರುವುದಿಲ್ಲ. ತಕ್ಷಕನು ಕೇವಲ ನಿಮಿತ್ತಮಾತ್ರನಾಗಿದ್ದಾನೆ" ಎಂದು ಉಪದೇಶಿಸಿದರು. ಜನಮೇಜಯನು ಹಿರಿಯರ ಮಾತನ್ನು ಗೌರವಿಸಿ, ಸರ್ಪಯಾಗವನ್ನು ನಿಲ್ಲಿಸಿದನು. *(ಮುಗಿಯಿತು)*

## " ಅವರು ಸಾಕ್ಷಾತ್ ಆದ್ಯಾಶಕ್ತಿ, ಜಗಜ್ಜನನಿ "



ಸ್ವಾಮಿ ಶಿವಾನಂದರು ತಮ್ಮಿಂದ ಮಂತ್ರದೀಕ್ಷೆ ಪಡೆದಿದ್ದ ಒಬ್ಬಳು ಹುಡುಗಿಗೆ ಹೀಗೆಂದರು: "ಶ್ರೀಮಾತೆಯ ಜೀವನಚರಿತ್ರೆಯನ್ನು ನೀನು ಓದಿರಬೇಕಲ್ಲವೆ? ಈ ಯುಗದ ಸಮಗ್ರ ನಾರೀಕುಲದ ಆದರ್ಶವಾಗಿದ್ದಾರೆ ಅವರು. ಅವರ ಜೀವನ ಅತ್ಯದ್ಭುತ. ನರದೇಹಧಾರಣೆ ಮಾಡಿ ಸಾಧಾರಣ ಗೃಹಸ್ಥ ವಧುವಿನಂತೆ ಇದ್ದರು. ಆದರೆ ಅವರು ಸಾಕ್ಷಾತ್ ಆದ್ಯಾಶಕ್ತಿ, ಜಗಜ್ಜನನಿಯೆ ಅಲ್ಲದೆ ಅನ್ಯರಲ್ಲ. ಶಾಸ್ತ್ರಗಳಲ್ಲಿ ಯಾರು ಕಾಳೀ, ತಾರಾ, ಮಹಾವಿದ್ಯೆಯರೆಂದು ವರ್ಣಿತರಾಗಿದ್ದಾರೆಯೊ ಆ ದಶಮಹಾವಿದ್ಯೆಯರೆಲ್ಲರೂ ಏಕೀಭವಿಸಿದ ಪ್ರತಿರೂಪವಾಗಿದ್ದಾರೆ ಶ್ರೀಮಾತೆ. ಠಾಕೂರರ ಯುಗಧರ್ಮ ಸಂಸ್ಥಾಪನಾರೂಪದ ನರಲೀಲೆಯನ್ನು ಪೂರ್ಣಗೊಳಿಸುವುದಕ್ಕಾಗಿ ಜಗತ್ತಿನಲ್ಲಿ ಅವತೀರ್ಣರಾಗಿದ್ದಾರೆ. ಸಾಧಾರಣ ಮಾನವರು ಅವರನ್ನು ಗುರುತಿಸಬಲ್ಲರೆ? ನಾವೂ ಮೊದಮೊದಲು ಅವರನ್ನು ಸ್ವಲ್ಪವೂ ಅರಿಯಲಾರದೆ ಹೋದೆವು. ತಮ್ಮ ಈಶ್ವರೀಭಾವವನ್ನು ಎಷ್ಟು ಸಮರ್ಪಕವಾಗಿ ಅಡಗಿಸಿಟ್ಟುಕೊಂಡರೆಂದರೆ ಅವರ ನಿಜವನ್ನು ಒಂದಿನಿತೂ ಕಂಡುಹಿಡಿಯಲು ಆಗುತ್ತಿರಲಿಲ್ಲ. ಅವರು ಯಾರು ಎಂಬುದು ಠಾಕೂರರೊಬ್ಬರಿಗೆ ಮಾತ್ರ ಗೊತ್ತಿತ್ತು; ಅಲ್ಲದೆ ಸ್ವಾಮೀಜಿಗೂ ಒಂದು ಕಿಂಚಿತ್ ಅರಿವಾಗಿತ್ತು. ಸ್ವಾಮೀಜಿ ಪಾಶ್ಚಾತ್ಯ ದೇಶಗಳಿಗೆ ಹೋಗುವ ಮುನ್ನ ಶ್ರೀಮಾತೆಯೊಬ್ಬರಿಗೇ ತಿಳಿಸಿದರು ; ಅವರ ಆಶೀರ್ವಾದವನ್ನು ಪಡೆದ ಮೇಲೆಯೆ ಸ್ವಾಮೀಜಿ ಸಮುದ್ರ ದಾಟಿದ್ದು. ಅಮ್ಮನವರು ಅವರಿಗೆ ಹೃತ್ಪೂರ್ವಕವಾಗಿ ಆಶೀರ್ವಾದ ಮಾಡಿ ಹೇಳಿದರಂತೆ: 'ಮಗೂ, ನೀನು ದಿಗ್ವಿಜಯಿಯಾಗಿ ಹಿಂತಿರುಗು. ನಿನ್ನ ಮುಖದಲ್ಲಿ ಸರಸ್ವತಿ ನೆಲೆಸಲಿ!' ಹಾಗೆಯೆ ಆಯಿತು! ತಾಯಿಯ ಆಶೀರ್ವಾದದಿಂದ ಸ್ವಾಮೀಜಿ ವಿಶ್ವವಿಜಯಿಯಾದರು."

*('ಗುರುವಿನೊಡನೆ ದೇವರೊಡನೆ', ಪು.297)*





# ಸ್ವಾಮಿ ವಿವೇಕಾನಂದರು ನಿರೂಪಿಸಿದ
## ನೀತಿಕಥೆಗಳು

ಡಾ. ಕೆ. ಅನಂತರಾಮು

# ಅಳಿಲು ಭಕ್ತಿ ಮಳಲು ಸೇವೆ

ಸ್ವಾಮಿ ವಿವೇಕಾನಂದರು ಭರತಖಂಡದಲ್ಲಿ "ಆಮೂಲಾಗ್ರ ಸುಧಾರಣೆ"ಯಾಗಬೇಕು ಎಂದು ಆಶಿಸುತ್ತಿದ್ದರು. ಚೂರುಪಾರು ಸುಧಾರಣೆಗಳಿಂದ ಏನೂ ಪ್ರಯೋಜನವಾಗುವುದಿಲ್ಲ ಎಂದು ಅವರು ಹೇಳುತ್ತಿದ್ದರು. ಹಾಗೆ ಆಮೂಲಾಗ್ರ ಸುಧಾರಣೆಗಾಗಿ ಪ್ರಯತ್ನಿಸುವಾಗಲೂ ದೇವರ ಸ್ಥಾನದಲ್ಲಿ ನಿಂತು ಸಮಾಜವನ್ನು ಕುರಿತು "ನೀನು ಇದೇ ದಿಕ್ಕಿನಲ್ಲಿ ಹೀಗೆಯೇ ಚಲಿಸಬೇಕು" ಎಂದು ಆಜ್ಞೆ ಮಾಡುವುದು ಸಾಧ್ಯವಿಲ್ಲ. ಹಾಗೆ ಪ್ರಭುವಿನಂತೆ ಆಜ್ಞೆ ಮಾಡಲೂಬಾರದು. ಎನಗಿಂತ ಕಿರಿಯರಿಲ್ಲ ಎಂಬ ಭಾವನೆಯಿಂದ, ರಾಮಾಯಣ ಕಾಲದ ಅಳಿಲಿನಂತೆ, ಸೇವಾ ತತ್ಪರರಾಗಿರಬೇಕು ಎಂದು ಹೇಳುತ್ತ ಆ ಅಳಿಲಿನ ಕಥೆಯನ್ನು ಅತ್ಯಂತ ಸಂಗ್ರಹವಾಗಿ ಸೂಚಿಸಿ ಮುನ್ನಡೆದಿದ್ದಾರೆ.

ಶ್ರೀರಾಮನು ಸಮುದ್ರಕ್ಕೆ ಸೇತುವೆ ಕಟ್ಟುತ್ತಿದ್ದ ಕಾಲದಲ್ಲಿ ಕಪಿವೀರರೂ, ಜಾಂಬವವೀರರೂ ಅಹೋರಾತ್ರಿ ಬಂಡೆಗಲ್ಲುಗಳನ್ನೂ, ಹೆಮ್ಮರಗಳನ್ನೂ ತಂದೊಟ್ಟುತ್ತಾ ಕಾರ್ಯತತ್ಪರರಾಗಿದ್ದರು. ಪುಟ್ಟ ಪ್ರಾಣಿಗಳಾದ ಅಳಿಲುಗಳು ಅದನ್ನು ಕುತೂಹಲದಿಂದ ನಿಟ್ಟಿಸುತ್ತಿದ್ದವು. "ಈ ಸೇತುಬಂಧನಕ್ಕೆ ಸಂಬಂಧಿಸಿದಂತೆ ನಾವೇನು ರಾಮಸೇವೆ ಮಾಡಬಹುದು" ಎಂದು ಅವು ಆಲೋಚಿಸಿದವು. ಆಗ ಅವುಗಳಿಗೆ ಒಂದು ಉಪಾಯ ಹೊಳೆಯಿತು. ಸಮುದ್ರ ಜಲದಲ್ಲಿ ಮುಳುಗಿ ಹೊರಬಂದು ಸಮುದ್ರತೀರದ ಮರಳರಾಶಿಯ ಮೇಲೆ ಚೆನ್ನಾಗಿ ಹೊರಳಾಡುವುದು; ಆಮೇಲೆ ಸಮುದ್ರಕ್ಕೆ ಇಳಿದು, ತಮ್ಮ ಮೈಗಂಟಿದ ಮರಳನ್ನೆಲ್ಲ ಆ ಸಮುದ್ರಜಲದಲ್ಲಿ ಕೊಡಹುವುದು; ಮತ್ತೆ ಮೇಲೆ ಬಂದು ಮರಳರಾಶಿಯ ಮೇಲೆ ಹೊರಳಾಡುವುದು, ಮತ್ತೆ ಸಮುದ್ರಕ್ಕಿಳಿದು ಕೊಡಹುವುದು– ಹೀಗೆಯೇ ಎಡಬಿಡದೆ ಮಾಡತೊಡಗಿದವು. ಕಪಿವೀರರು ಸಮುದ್ರಕ್ಕೆ ಎಸೆಯುತ್ತಿದ್ದ ಬಂಡೆಗಲ್ಲುಗಳ ಬಿರುಕುಗಳ ನಡುವೆ, ತಮ್ಮ ದೇಹಕ್ಕೆ ಅಂಟಿದ ಮರಳು ಶೇಖರಗೊಂಡು, ತನ್ಮೂಲಕ ಸೇತುವೆಯು ಭದ್ರಗೊಳ್ಳಲಿ ಎಂದು ಆ ಅಳಿಲುಗಳು ಹಾಗೆ ಮಾಡತೊಡಗಿದವು.

ಅಳಿಲುಗಳ ಆ ಕೆಲಸವನ್ನು ಕಂಡ ಶ್ರೀರಾಮನು "ಏನು ಮಾಡುತ್ತಿದ್ದೀರಿ ನನ್ನ ಮುದ್ದು ಅಳಿಲುಗಳೇ" ಎಂದು ಕೇಳಿದನು. ಆಗ ಅಳಿಲುಗಳು ತಮ್ಮ ಕಾರ್ಯಯೋಜನೆಯನ್ನು ವಿವರಿಸಿ "ಅಳಿಲು ಭಕ್ತಿ ಮಳಲು ಸೇವೆ ನಮ್ಮದು ತಂದೆ" ಎಂದು ನಮಸ್ಕಾರ ಮಾಡಿದವು. ಅದಕ್ಕೆ ಶ್ರೀರಾಮನು "ಕಪಿವೀರರೂ ಜಾಂಬವವೀರರೂ ಬಂಡೆಗಲ್ಲುಗಳನ್ನೂ, ಹೆಮ್ಮರಗಳನ್ನೂ ಒಂದೇ ಸಮನೆ ತಂದೆಸೆಯುತ್ತಿದ್ದಾರೆ. ನಿಮ್ಮ ಮೇಲೇನಾದರೂ ಬಿದ್ದರೆ ಅಪ್ಪಚ್ಚಿಯಾಗಿಬಿಡುತ್ತೀರಿ, ನಿಮಗೆ ಭಯವಿಲ್ಲವೆ?" ಎಂದು ಕೇಳಿದನು. ಅದಕ್ಕೆ ಅಳಿಲುಗಳು "ಮರಣ ಎಂಬುದೇನು ಎರಡು ಬಾರಿ ಬರುತ್ತದೆಯೆ, ನಿನ್ನ ಕಾರ್ಯಕ್ಕಾಗಿ ನಮ್ಮ ಪ್ರಾಣ ಅರ್ಪಿತವಾಯಿತೆಂದರೆ ನಾವು ಕೃತಾರ್ಥರಾಗುವುದಿಲ್ಲವೆ ತಂದೆ! ನೀನಿರುವಾಗ ನಮಗೇಕೆ ಭಯ?" ಎಂದು ಉತ್ತರಕೊಟ್ಟವು. ಆಗ ಶ್ರೀರಾಮನಿಗಾದ ಸಂಭ್ರಮ ಅಷ್ಟಿಷ್ಟಲ್ಲ. "ನಿಮ್ಮ ಭಕ್ತಿಯನ್ನು ಮೆಚ್ಚಿದ್ದೇನೆ. ನಿಮ್ಮ ಸೇವೆಯನ್ನು ನಾನು ಮನಸಾರೆ ಸ್ವೀಕರಿಸಿದ್ದೇನೆ ಅಳಿಲು



ಗಳೇ" ಎಂದು ಹೇಳುತ್ತ, ಮಮತೆಯಿಂದ ಅವುಗಳ ಬೆನ್ನು ನೇವರಿಸಿದನು. ಅದೇ ಕಾರಣವಾಗಿ ಶ್ರೀರಾಮನ ಕೈ ಬೆರಳುಗಳ ಗುರುತು ಅವನ ಹಣೆಯ ಮೇಲಿನ ನಾಮದಂತೆ, ಅವುಗಳ ಬೆನ್ನ ಮೇಲೆ ಮೂಡಿಕೊಂಡಿತು. ಅಳಿಲುಗಳು ಮಾಡಿದ ರಾಮಸೇವೆಯ ಗುರುತಾಗಿ 'ರಾಮನಾಮ' ಶಾಶ್ವತವಾಗಿ ಉಳಿದುಕೊಂಡಿತು.

ನಮ್ಮ ರಾಷ್ಟ್ರೀಯ ಮಹಾಯಂತ್ರವು ಶತಶತಮಾನಗಳಿಂದ ಕೆಲಸ ಮಾಡುತ್ತಾ ಬಂದಿದೆ. ಸಹಸ್ರಾರು ಸನ್ನಿವೇಶಗಳು ಅದರಲ್ಲಿ ಮಿಲನಗೊಂಡಿವೆ. ಅದರ ಗತಿಯನ್ನು ನಿರ್ಧರಿಸುವುದು ಯಾರಿಂದಲೂ ಸಾಧ್ಯವಿಲ್ಲ. ಸಮಸ್ಯೆಗಳಾದರೋ ಬೇಕಾದಷ್ಟಿವೆ. ಆ ಸಮಸ್ಯೆಗಳಾದರೋ ಹಳೆಯ ಕಾಲದಿಂದ ಇರುವ ವಾತರೋಗದಂತೆ ಜಟಿಲವಾಗಿವೆ. ಹಾಗೆಂದ ಮಾತ್ರಕ್ಕೆ ಧೃತಿಗೆಡಬೇಕಾಗಿಲ್ಲ. ಅವಸರಪಡದೆ ಸಾವಧಾನವಾಗಿ ಕಾರ್ಯೋನ್ಮುಖರಾಗಬೇಕಾಗಿದೆ. ಅಳಿಲುಗಳಂತೆ ಎಡೆಬಿಡದೆ, ವಿನಯದಿಂದ ಕೆಲಸಮಾಡಬೇಕಾಗಿದೆ – ಎಂದು ವಿವೇಕಾನಂದರು ಉಪದೇಶ ನೀಡಿದ್ದಾರೆ.

ಭಗವದ್ಗೀತೆಯ ಒಂದು ಮುಖ

# ಜೀವನವೇ ಒಂದು ಸವಾಲು

ಸ್ವಾಮಿ ಧರ್ಮವ್ರತಾನಂದ

**ಭಗವದ್ಗೀತೆ ಕೇವಲ ಧರ್ಮಗ್ರಂಥವಷ್ಟೇ ಅಲ್ಲ; ಅದು ನಿತ್ಯಜೀವನದಲ್ಲಿ ಅನುಸರಿಸಬೇಕಾದ ಕೆಲವು ಮುಖ್ಯವಾದ ಪ್ರಾಯೋಗಿಕ ರೀತಿನೀತಿಗಳನ್ನೂ ಒಳಗೊಂಡ ಮೌಲಿಕ ಗ್ರಂಥವಾಗಿದೆ. ಈ ವಿಚಾರವನ್ನು ಸಂಕ್ಷಿಪ್ತವಾಗಿ ವಿವರಿಸಿ ವಿಶ್ಲೇಷಿಸಿರುವ ಲೇಖಕರು ಮಂಗಳೂರು ರಾಮಕೃಷ್ಣ ಮಿಷನ್ ಬಾಲಕಾಶ್ರಮದ ಪಾಲಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.**

ಗೀತೆ–ಭಗವದ್ಗೀತೆ, ಒಂದು ಶ್ರೇಷ್ಠವಾದ ಹಾಗೂ ತತ್ತ್ವಪೂರ್ಣವಾದ ಕೃತಿ. ಪ್ರತಿಯೊಬ್ಬರೂ, ಅಂದರೆ ಹಿಂದೂಗಳು ಮಾತ್ರವಲ್ಲದೆ, ಜ್ಞಾನಾರ್ಜನೆಗೆ ಮತ್ತು ಸತ್ಯದ ಅರಿವಿಗಾಗಿ ಆಶಿಸುವ ಪ್ರತಿಯೊಬ್ಬರೂ ಓದಬೇಕಾದ ಗ್ರಂಥವಿದು. ಇಲ್ಲಿ ಯಾವುದೇ ಒಂದು ಮತವನ್ನಾಗಲಿ ಅಥವಾ ಪಂಥವನ್ನಾಗಲಿ ಕುರಿತು ಹೇಳದೆ, 'ಪರಮಸತ್ಯ' ವನ್ನಷ್ಟೇ ಸಾದರಪಡಿಸಲಾಗಿದೆ. ಗೀತೆಯು ಆ ಸತ್ಯವನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಒಂದು ಪ್ರಾಯೋಗಿಕ ವಿಧಾನವನ್ನು ನೀಡುತ್ತದೆ. ಅದು ಮಾನವತೆಯ ಸಾರ್ಥಕ್ಯಕ್ಕೆ ದಾರಿದೀಪವಾಗಿ ನಿಂತಿದೆ.

ಗೀತೆಯು ಹಲವಾರು ವಿಧದಿಂದ, ಉದಾಹರಣೆ ಸಹಿತವಾಗಿ ಜೀವನದ ದುಃಖ–ದುಮ್ಮಾನಗಳನ್ನು ಅರಿತು, ಅದರಿಂದ ಪಾರಾಗಲು ಮಾರ್ಗವನ್ನು ಸೂಚಿಸುತ್ತದೆ. ಅರ್ಜುನನನ್ನು ಉಪಯೋಗಿಸಿಕೊಂಡು, ಅವನ ಮೂಲಕ ಅನೇಕ ಪ್ರಶ್ನೆಗಳನ್ನು ಕೇಳಿಸಿ, ಉತ್ತರ ನೀಡುತ್ತದೆ ಭಗವದ್ಗೀತೆ. ಇಲ್ಲಿ ಶ್ರೀಕೃಷ್ಣ ಪರಿಪೂರ್ಣ ಜೀವನದ ತತ್ತ್ವವನ್ನರಿತ, ಕರ್ತವ್ಯವನ್ನು ಪಾಲಿಸಿದ, ನಿಷ್ಠಾವಂತನಾದ ಹಿರಿಯ ವ್ಯಕ್ತಿ. ಸ್ನೇಹಿತನಾಗಿ, ಶಿಷ್ಯನಾಗಿ ಬಂದಂತಹ ಅರ್ಜುನನಿಗೆ ಜೀವನದ ರಹಸ್ಯವನ್ನು – ಪರಮ ಗುರಿಯನ್ನು ವಿವರಿಸುತ್ತಾನೆ ಕೃಷ್ಣ.

ಅರ್ಜುನನು ತಾನು ಶಿಷ್ಯನಾಗಿ ಬಂದಿದ್ದೇನೆ, ದಾರಿ ತೋರಿಸು ಎನ್ನುವವರೆಗೂ ಮೌನದಿಂದಲೇ ಇರುತ್ತಾನೆ ಶ್ರೀಕೃಷ್ಣ. ಅನಂತರವೇ ತನ್ನ ಅನುಭವದ ನುಡಿಗಳನ್ನು ಹರಿಸಿ **ಹೋರಾಟವೇ ಜೀವನ – ಅದು ಒಂದು ಸವಾಲು** ಎಂದು ಸಾರುತ್ತಾನೆ.

ಸ್ವಾಮಿ ಬ್ರಹ್ಮಾನಂದರನ್ನು ಶಿಷ್ಯನೊಬ್ಬ, 'ಸ್ವಾಮೀಜಿ, ಜೀವನ ಅಂದರೆ ಏನು?' ಎಂದು ಕೇಳಿದಾಗ, ಅವರು ಕೊಟ್ಟ ಉತ್ತರ, ' ಹೋರಾಟ, ಹೋರಾಟ, ಹೋರಾಟ' ಎಂದು. ಇದನ್ನೇ ಸ್ವಾಮಿ ವಿವೇಕಾನಂದರು, 'ತನ್ನನ್ನು ಕೆಳಗೊತ್ತುತ್ತಿರುವ ಪರಿಸ್ಥಿತಿಗಳಲ್ಲಿ ಒಂದು ಜೀವಿಯ ವಿಕಾಸ ಮತ್ತು ಬೆಳವಣಿಗೆಯೇ ಜೀವನ' ಎಂದು ಹೇಳಿದರು. ಅಂದರೆ ತಮಗೆ ವಿರುದ್ಧವಾದ ಘಟನೆಗಳನ್ನು, ಪರಿಸ್ಥಿತಿಗಳನ್ನು ಎದುರಿಸಿ ತಾವು ಬೆಳೆಯಬೇಕು, ಹೋರಾಡಬೇಕು. ಅದೇ ಜೀವನ.

ಜೀವನಧರ್ಮವನ್ನು ಬೋಧಿಸುವ ಗೀತೆ, ಈ ಹೋರಾಟಕ್ಕೆ ಕಾರಣವನ್ನು ನೀಡುತ್ತದೆ. ಅದೇ – ಆಸೆ, ಆಸಕ್ತಿ ಮತ್ತು ಮಮಕಾರ. ಇವುಗಳಿಗೆ ಬಲಿಯಾಗಿ ಮನುಷ್ಯನು ಸ್ವಾರ್ಥಿಯಾಗಿ ಹೋರಾಟದಲ್ಲಿ ಮುಳುಗುತ್ತಾನೆ.

**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥**
**(೩.೩೭)**

ಇವು ಎಲ್ಲಾ ಪಾಪಗಳಿಗೆ ಮೂಲ, ಹೋರಾಟಕ್ಕೆ ಮೂಲ ಎನ್ನುತ್ತದೆ ಗೀತೆ. 'ನಾನು ದೇಹ, ಮನಸ್ಸು ಮತ್ತು ಬುದ್ಧಿಗಳೇ ಆಗಿದ್ದೇನೆ' ಎಂಬ ಮಾಯೆಯ ತೆರೆ ನಿನ್ನನ್ನು ಮುಚ್ಚಿದೆ. ಅದನ್ನು ಸರಿಸಲು ನಿನಗೆ ಪ್ರಕೃತಿಯು ಸವಾಲನ್ನು ಒಡ್ಡಿದೆ. ಜನ್ಮಜನ್ಮಾಂತರದ ಈ ದೇಹ ಮತ್ತು ಅದರ ಸಮೂಹವೇ ನಾನೆಂಬ ನಮ್ಮ ಈ ಸಂಸ್ಕಾರದ ಬಲವನ್ನು ಮೀರಿ, ಮಾನವತ್ವದಿಂದ ದೈವತ್ವಕ್ಕೆ ಏರು ಎನ್ನುತ್ತದೆ. ಇದಕ್ಕೆ ದೊಡ್ಡ ಹೋರಾಟ ಆವಶ್ಯಕ ಎಂದು ಹೇಳುತ್ತಾ, ಧೈರ್ಯವನ್ನು ತುಂಬಲು ಭಗವಂತನೇ ಆಶೀರ್ವಾದದ ಮೂಲಕ ಸ್ಫೂರ್ತಿಯನ್ನು ತುಂಬುತ್ತಾನೆ:

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ (೨.೩)**

– ಎಂದು ಹೋರಾಡಲು ಅಪ್ಪಣೆಯನ್ನೂ ಈ ಶ್ಲೋಕದ ಮೂಲಕ ನೀಡುತ್ತಾನೆ.

ಪೂರ್ವಸಂಸ್ಕಾರದ ಬಲದಿಂದ ಉಂಟಾಗುವ ನಾನು ದುಃಖಿ–ಸುಖಿ, ಬಡವ–ಬಲ್ಲಿದ, ಮೇಲು–ಕೀಳು ಎಂಬ ಈ ಭಾವನೆಗಳು ಕೇವಲ ತೋರ್ಪಡಿಕೆ ಮಾತ್ರ; ಅದು ನಿಜವಲ್ಲ. ಈ ರೀತಿಯಾಗಿ ಭಾವಿಸುವುದು, ನರಳುವುದು ಕೇವಲ ಶಿಖಂಡಿತನ. ಈ ಶಿಖಂಡಿತನದ ದೌರ್ಬಲ್ಯವನ್ನು ಬಿಡು. ನೀನು ಈ ಮಾಯೆಯ ಅಡಿಯಾಳಲ್ಲ; ನೀನು ನಿತ್ಯ, ಮುಕ್ತ, ಶಕ್ತ ಆತ್ಮ ಎನ್ನುತ್ತಾನೆ.

ಇಲ್ಲಿ ಗೀತೆಯು ಹೇಳುವ ಮತ್ತೊಂದು ಮಾತೆಂದರೆ "ನೀನು ಕಷ್ಟಗಳನ್ನು–ದುಃಖಗಳನ್ನು ಗೆಲ್ಲಬೇಕಾದರೆ,

ಅವುಗಳನ್ನು ಅನುಭವಿಸುವುದರ ಮೂಲಕ ಹಾಗೂ ಅವುಗಳನ್ನು ಎದುರಿಸುವುದರ ಮೂಲಕ ಸಾಧ್ಯವೇ ಹೊರತು, ಅವುಗಳಿಂದ ದೂರ ಓಡುವುದರಿಂದ ಅಲ್ಲ. ಹೀಗೇನಾದರೂ ನೀನು ಪಲಾಯನವಾದವನ್ನು ಅನುಸರಿಸಿದರೆ, ನಿನ್ನ ಹಿತೈಷಿಗಳಿಂದ, ಶತ್ರುಗಳಿಂದ ಎಲ್ಲರಿಂದಲೂ ಅವಮಾನಿತನಾಗುವೆ." ಇದೇ ವಿಚಾರವನ್ನು ಆಧುನಿಕ ಜನರಿಗೆ ಸ್ವಾಮಿ ವಿವೇಕಾನಂದರು ತಮ್ಮ ಅನುಭವವನ್ನು ಆಧರಿಸಿ ಹೇಳುತ್ತಾರೆ: 'ಸ್ವರ್ಗಕ್ಕೆ ದಾರಿಯಿರುವುದಾದರೆ ಅದು ನರಕದ ಮೂಲಕವೇ' ಎಂದು. ಅವರು ತಮ್ಮ ಜೀವನದಲ್ಲಿ ನಡೆದ ಒಂದು ಘಟನೆಯನ್ನು ಹೇಳುತ್ತಾ, ಒಮ್ಮೆ ತಾವು ಮಂಗಗಳ ಕೈಯಲ್ಲಿ ಸಿಕ್ಕು ಹೆದರಿ ಓಡುತ್ತಿದ್ದಾಗ, ಸಾಧುವೊಬ್ಬರು ತಮಗೆ, 'ಓಡಬೇಡ, ಎದುರಿಸು, ಓಡಬೇಡ ಎದುರಿಸು' ಎಂದರಂತೆ. ಸ್ವಾಮೀಜಿ ಹಿಂತಿರುಗಿ ನಿಂತು ತಮ್ಮ ಕೈಯಲ್ಲಿದ್ದ ದೊಣ್ಣೆಯನ್ನು ಎತ್ತಿದ ತಕ್ಷಣ ಮಂಗಗಳೆಲ್ಲಾ ಪಲಾಯನ ಮಾಡಿದವು. ಅವುಗಳಂತೆ ನಮ್ಮ ಜೀವನದ ಕಷ್ಟಗಳನ್ನು ಎದುರಿಸಿದರೆ ಅವು ನಮ್ಮಿಂದ ದೂರವಾಗುತ್ತದೆ ಎನ್ನುತ್ತಾರೆ.

ಆತ್ಮವು ಹಲವಾರು ಪರಿಸ್ಥಿತಿಗಳೊಂದಿಗೆ ಹೋರಾಡಿದ ನಂತರ ಒಂದಲ್ಲ, ಹಲವುಬಾರಿ ಬಲಶಾಲಿಯಾಗಿ ಹೊರಹೊಮ್ಮುತ್ತದೆ. ನಿಜ, ನಾವು ಕಷ್ಟಗಳಿಂದ ದೂರ ದೂರ ಓಡಿಹೋದಂತೆ ಅವು ನಮ್ಮನ್ನು ಹಿಂಬಾಲಿಸಿ ಹತ್ತಿರ ಹತ್ತಿರ ಬರುತ್ತಲೇ ಇರುತ್ತವೆ. ಅವು ನೆರಳಿನಂತೆ ನಮ್ಮ ಸಂಗಾತಿ. ಇದರಿಂದ ಪಾರಾಗಲು ಶ್ರೀಕೃಷ್ಣ ಪ್ರತಿ ಅಧ್ಯಾಯದಲ್ಲೂ ಹೇಳುವ ಉಪಾಯವೇ, ಧೈರ್ಯದ ಹೋರಾಟ ಮತ್ತು ಅಸಂಗತ್ವ-ಅನಾಸಕ್ತಿ.

ನೀನು ಕೇವಲ ಪಾತ್ರಧಾರಿ, ಪಾತ್ರವೇ ನೀನಾಗಬೇಡ. ಯಾವಾಗ 'ಪಾತ್ರವೇ ನಾನು' ಎಂದು ಭಾವಿಸುವೆಯೋ ಅಂದು ನೀನು ಮಾಯೆಯ ಬಲೆಯಲ್ಲಿ ಬಿದ್ದೆ ಎಂದು ಅರ್ಥ. ಭಗವಂತನ ಕೈಯಲ್ಲಿರುವ ಲೇಖನಿ ಮಾತ್ರವೇ ನೀನು, ಬರೆಯುವ ಶಕ್ತಿ ಅವನು. ಯಾವ ಕ್ಷಣದಲ್ಲಿ ನಾನೇ ಬರೆಯುವ ಕೈ ಎಂದು ಅಂದುಕೊಳ್ಳುವೆ, ಆ ಕ್ಷಣದಲ್ಲಿ ನೀನು ಎಲ್ಲಾ ಕಷ್ಟಗಳಿಗೂ ಬಲಿಯಾಗುವೆ ಎಂದು ಹೇಳುತ್ತಾನೆ.

ಹೊರಗಿನ ಶತ್ರುಗಳಿಗಿಂತ ನಮ್ಮ ಒಳಗಿರುವ ಶತ್ರುಗಳೊಡನೆ ಹೋರಾಡಲು ಮನಸ್ಸಿನ ಶಕ್ತಿ ಮತ್ತು ದೃಢತೆಯ ಆವಶ್ಯಕತೆ ಹೆಚ್ಚು. ಅವುಗಳಿಂದ ದೂರ ಓಡಿ ಹೋಗುವುದಕ್ಕೆ ಬೇಕಾಗುವ ಶಕ್ತಿಗಿಂತ, ಅವುಗಳೊಡನೆ ಹೋರಾಡಲು ಅಧಿಕ ಶಕ್ತಿ ಬೇಕಾಗದು.

ನಮ್ಮ ಹೋರಾಟಕ್ಕೆ, ಕಷ್ಟಕ್ಕೆ, ದುಃಖಕ್ಕೆ ಕಾರಣ ಆಸೆ. ಆಸೆಯನ್ನು ಗೆದ್ದವನು, ಅಂದರೆ ತನ್ನನ್ನು ತಾನು ಗೆದ್ದವನು ಮಾತ್ರವೇ ಲೋಕಕ್ಕೇ ಯಜಮಾನನಾಗಬಲ್ಲ. ಸುಭಾಷಿತವೊಂದು ನುಡಿದಂತೆ,

**ಆಶಾಯಾ ಯೇ ದಾಸಾಸ್ತೇ ದಾಸಾಃ ಸರ್ವಲೋಕಸ್ಯ ।**
**ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥**

'ಯಾರು ಆಸೆಗೆ ದಾಸರೋ ಅವರು ಲೋಕಕ್ಕೇ ದಾಸರು (ಗುಲಾಮಗಿರಿಯಲ್ಲಿ ಕಷ್ಟವಲ್ಲದೆ, ದುಃಖವಲ್ಲದೆ ಮತ್ತೇನಿರಲು ಸಾಧ್ಯ) ಆಸೆಯು ಯಾರಿಗೆ ದಾಸಿಯೋ, ಲೋಕವೇ ಅವರಿಗೆ ದಾಸನಾಗುತ್ತದೆ.' ಇದಕ್ಕೆ ವಿವರಣೆಯ ಅಗತ್ಯವೇ ಇಲ್ಲ. ಈ ಪ್ರಪಂಚದ ಎಲ್ಲಾ ಅನರ್ಥಗಳಿಗೆ, ನಮ್ಮ ಹೋರಾಟಕ್ಕೆ ನಮ್ಮ ಎಲ್ಲ ಬವಣೆಗಳಿಗೆ ಮೂಲ ಈ ಆಸೆ. ಮತ್ತೆ ಮತ್ತೆ ನಮ್ಮನ್ನು ಈ ಪ್ರಪಂಚಕ್ಕೆ ಎಳೆದು ತರುತ್ತಿರುವುದು ಈ ಆಸೆಯೇ; ನಮ್ಮನ್ನು ಹೋರಾಡುವಂತೆ ಮಾಡುತ್ತಿರುವುದೂ ಈ ಆಸೆಯೇ. ಇದೊಂದು ಚಕ್ರ. ಆದಿ ಅಂತ್ಯವಿಲ್ಲದ ಜೀವನಚಕ್ರ. ಆಸೆ-ಇದರಿಂದ ಹೋರಾಟ (ಕರ್ಮ)- ಇದರಿಂದ ಸಂಸ್ಕಾರ, ಮತ್ತೆ ಇದರಿಂದ ಆಸೆ. ಈ ಚಕ್ರವನ್ನು ಮುರಿದು ಜೀವನದಿಂದ ಪಾರಾಗುವುದಕ್ಕೆ ಹೋರಾಡಬೇಕು. ಮಾಯಾಜಿಂಕೆಯ ಹಿಂದೆ ಬಿದ್ದ ರಾಮ. ಅವನಿಂದ ದೂರ ದೂರ ಓಡುತ್ತಿತ್ತು ಆ ಜಿಂಕೆ. ಅದನ್ನು ಕೊಂದಲ್ಲದೆ ಬೇರೆ ಅದರಿಂದ ಬಿಡುಗಡೆ ಇಲ್ಲ ಎಂದರಿತ ಮೇಲೆ, ಅದನ್ನು ಕೊಂದು ಅದರ ನಿಜಸ್ವರೂಪವನ್ನು ಅರಿತ. ಈ ಬಂಧನದಿಂದ ತಪ್ಪಿಸಿಕೊಳ್ಳಲು ಇರುವ ಸುಲಭ ಮಾರ್ಗವನ್ನು ಶ್ರೀಕೃಷ್ಣ ಭಗವದ್ಗೀತೆಯಲ್ಲಿ ವಿವರಿಸುತ್ತಾನೆ.

**ಏನು ಹಾಗಂದರೆ? :** ಇದೇ ಆಸೆಯನ್ನು ನಾವು ಸ್ವಲ್ಪ ವಿಶಾಲಗೊಳಿಸಿದಲ್ಲಿ ಅದು ಈ ಪ್ರಪಂಚದ ಎಲ್ಲಾ ಅನರ್ಥ, ಸ್ವಾರ್ಥ, ಕಷ್ಟ-ನಷ್ಟ, ದುಃಖ-ದುಮ್ಮಾನಗಳನ್ನು ನಾಶಪಡಿಸುವ ವಿಶ್ವಾತ್ಮಭಾವನೆಗೆ ಮೂಲವಾಗುತ್ತದೆ. ಎಲ್ಲವೂ ನನಗೆ ಎನ್ನುವುದಕ್ಕಿಂತ, ಎಲ್ಲವೂ ನಮಗೆ ಎಂದರೆ, ನಾವು ಎಂಬಲ್ಲಿ ನಾನೂ ಸೇರುವುದರಿಂದ, ಜೀವನದಲ್ಲಿ ಹೋರಾಟವಿದ್ದರೂ ಅದರ ಉದ್ದೇಶ ಸರ್ವರ ಉನ್ನತಿಗೆ, ಸರ್ವೋದಯಕ್ಕೆ ಕಾರಣವಾಗುವುದು. ಇದರಿಂದ ಎಲ್ಲೂ ಸ್ವಾರ್ಥ, ಕಷ್ಟ-ನಷ್ಟ, ದುಃಖ-ದುಮ್ಮಾನಗಳು ಕಾಣದು. ಕೇವಲ ಆನಂದವೇ ತುಂಬಿರುತ್ತದೆ. ಇಂತಹ ಮಹಾತ್ಮನನ್ನೇ ಶ್ರೀಕೃಷ್ಣ ಪಂಡಿತ, ಸಮದರ್ಶಿ, ಸ್ಥಿತಪ್ರಜ್ಞ ಎಂದು ಕರೆಯುತ್ತಾನೆ. ಎಲ್ಲರಲ್ಲೂ ತನ್ನನ್ನು, ತನ್ನಲ್ಲಿ ಎಲ್ಲರನ್ನೂ ಕಾಣುವ ಈ ಹಂತವನ್ನು ತಲುಪುವುದೇ ಮಾನವ ಜೀವನದ ಗುರಿ. ಶ್ರೀರಾಮಕೃಷ್ಣರು ಕೂಡ ಇದನ್ನು ಮನುಷ್ಯಜನ್ಮದ ಉದ್ದೇಶ ಎನ್ನುತ್ತಾರೆ.

ಜೀವನವೇ ಒಂದು ಸವಾಲು. ಹೋರಾಡು, ಈ ಹಂತವನ್ನು ತಲುಪು, ಮುಕ್ತನಾಗು – ಎಂಬುದು ಗೀತೆಯ ಕಳಕಳಿಯ ನುಡಿ.



'ಗೀತಾ' ಎಂದು ಹನ್ನೆರಡು ಸಲ ಹೇಳಿ, ಅದು 'ತ್ಯಾಗಿ' 'ತ್ಯಾಗಿ' ಎಂದಾಗುತ್ತದೆ. ಗೀತೆ ಒಂದು ಮಾತಿನಲ್ಲಿ ತ್ಯಾಗವನ್ನು ಬೋಧಿಸುತ್ತದೆ. ಎಲ್ಲವನ್ನೂ ತ್ಯಜಿಸಿ ದೇವರಲ್ಲಿ ಶರಣಾಗತರಾಗಿರಿ. *–ಶ್ರೀರಾಮಕೃಷ್ಣರು*

ಕಥೆ : ಆರ್.ವಿ.

# ಭೀಷ್ಮನ ಪ್ರತಿಜ್ಞೆ

ಕಲೆ : ಶಂಕರ್

**1** ಶಂತನು ಚಕ್ರವರ್ತಿಯು ಹಸ್ತಿನಾಪುರವನ್ನು ಕೇಂದ್ರವನ್ನಾಗಿಟ್ಟುಕೊಂಡು ದೊಡ್ಡ ಸಾಮ್ರಾಜ್ಯವನ್ನು ಆಳುತ್ತಿದ್ದನು. ಗಂಗೆಯನ್ನು ವಿವಾಹವಾದ ಶಂತನುವಿಗೆ ದೇವವ್ರತನೆಂಬ ಮಗ ಹುಟ್ಟಿದ. ದೇವವ್ರತನು ದೊಡ್ಡವನಾದಾಗ ಅವನನ್ನು ಯುವರಾಜನನ್ನಾಗಿ ಮಾಡಿ ಪಟ್ಟಾಭಿಷೇಕ ಮಾಡಿದ.

ಪ್ರಿಯ ಪುತ್ರ ! ನಿನ್ನ ಜನನವಾದ ಕೂಡಲೇ ನಿನ್ನ ತಾಯಿ ನಿನ್ನನ್ನು ನನ್ನ ಕೈಗೊಪ್ಪಿಸಿ, ಅವಳು ದಿವ್ಯಲೋಕಕ್ಕೆ ಹೊರಟುಹೋದಳು. ಈಗ ನೀನು ಬಿಲ್ವಿದ್ಯೆಯೇ ಮೊದಲಾದ ವಿದ್ಯೆಗಳಲ್ಲಿ ಚೆನ್ನಾಗಿ ತರಬೇತಿ ಪಡೆದು ದೊಡ್ಡ ಶೂರನಾಗು. ನಾನು ಆಡಳಿತವನ್ನೆಲ್ಲ ನಿನ್ನ ಅಧೀನಕ್ಕೆ ಒಪ್ಪಿಸುತ್ತಿದ್ದೇನೆ. ನಿನ್ನಿಂದ ನಮ್ಮ ಚಂದ್ರವಂಶ ಇನ್ನಷ್ಟು ಬೆಳಗಲಿ ಎಂದು ನಾನು ನಿನ್ನನ್ನು ಹರಸುತ್ತೇನೆ.



ತಂದೆ, ನಿಮ್ಮ ಆಶೀರ್ವಾದ ವ್ಯರ್ಥವಾಗದು.

**2** ರಾಜ್ಯಭಾರದ ಹೊಣೆ ಕಡಿಮೆಯಾದಾಗ, ಶಂತನು ಒಂದು ದಿನ ಬೇಟೆಯಾಡಲು ಹೊರಟ. ತನ್ನ ಜೊತೆಗಾರರಿಂದ ಬೇರ್ಪಟ್ಟು, ಭೀಕರ ಕಾಡಿನ ನಡುವೆ ಒಂದು ತಲುಪಿದ. ಅಲ್ಲಿ..




**3** ಆ ಸುವಾಸನೆಯ ಮೂಲವನ್ನೇ ಹುಡುಕುತ್ತ ಹೊರಟ ಶಂತನು. ಅಲ್ಲಿ ಅವನು ದಿವ್ಯಸೌಂದರ್ಯದಿಂದ ಕೂಡಿದ ಸುಂದರ ಯುವತಿಯನ್ನು ಕಂಡ. ಆಶ್ಚರ್ಯದಿಂದ ಅವನು ಅವಳ ಬಳಿಗೆ ಹೋದ.

ತರುಣಿ! ನೀನು ಯಾರು? ಅದೇಕೆ ನಿನ್ನ ಕಡೆಯಿಂದ ಮನಮೋಹಕವಾದ ಸುವಾಸನೆ ಹೊರಬರುತ್ತಿದೆ?



ಮಹಾರಾಜ, ನಾನು ಸತ್ಯವತಿ. ನನ್ನನ್ನು ಯೋಜನಗಂಧಿಯೆಂದೂ ಕರೆಯುತ್ತಾರೆ. (ಒಂದು ಯೋಜನ ದೂರದವರೆಗೂ ಅವಳ ಸುಗಂಧ ಹರಡುವುದು.) ನನ್ನ ತಂದೆ ದಾಶರಾಜ; ಅವನು ಬೆಸ್ತರ ಅರಸ.

**4** ಮಹಾರಾಜ ಶಂತನು ದಾಶರಾಜನ ಬಳಿಗೆ ಹೋದ.

ನಾನು ಹಸ್ತಿನಾಪುರದ ರಾಜ ಶಂತನು. ನನಗೆ ನಿನ್ನ ಮಗಳು ಸತ್ಯವತಿಯನ್ನು ಮದುವೆ ಮಾಡಿಕೊಳ್ಳುವ ಬಯಕೆ ಉಂಟಾಗಿದೆ.



ಮಹಾರಾಜ, ದಯವಿಟ್ಟು ನನ್ನನ್ನು ಕ್ಷಮಿಸು. ಒಂದು ಷರತ್ತಿನ ಮೇಲೆ ನನ್ನ ಮಗಳು ಸತ್ಯವತಿಯನ್ನು ನಿನಗೆ ಮದುವೆ ಮಾಡಿಕೊಡಬಲ್ಲೆ. ನಿನಗೆ ಅವಳಲ್ಲಿ ಹುಟ್ಟುವ ಮಗನಿಗೆ ನೀನು ನಿನ್ನ ರಾಜ್ಯದ ಪಟ್ಟ ಕಟ್ಟಬೇಕು.

**5** ಅವನ ಮಾತನ್ನು ಕೇಳಿ ದಿಗ್ಭ್ರಮೆಗೊಂಡ ಶಂತನು ಅರಮನೆಗೆ ಮರಳಿದ. ಸತ್ಯವತಿಯನ್ನೇ ನೆನೆಯುತ್ತ, ಹಂಬಲಿಸುತ್ತ ಅವನು ದಿನೇ ದಿನೇ ಕೊರಗಿದ. ಇದನ್ನು ತಿಳಿದ ದೇವವ್ರತ ತಂದೆಯನ್ನು ಉಳಿಸಲೇಬೇಕೆಂದು ಅವನಿಗೆ ತಿಳಿಯದಂತೆ ದಾಶರಾಜನ ಬಳಿಗೆ ಬಂದ.

ದಾಶರಾಜ, ನಾನು ನಿನ್ನ ಆಸೆಯನ್ನು ಪೂರೈಸುತ್ತೇನೆ. ನನಗೆ ರಾಜ್ಯದ ಅಧಿಕಾರ ಬೇಡ. ನಿನ್ನ ಮಗಳನ್ನು ನನ್ನ ತಂದೆಗೆ ಮದುವೆ ಮಾಡಿಕೊಡು.



ಯುವರಾಜ! ನಾನು ನಿನ್ನನ್ನು ನಂಬುತ್ತೇನೆ. ನೀನು ಶ್ರೇಷ್ಠ ವ್ಯಕ್ತಿ. ಆದರೆ, ನಾಳೆ ನಿನ್ನ ಮಕ್ಕಳು ನನ್ನ ಮಗಳ ಮುಂದೆ ಬಂದು ರಾಜ್ಯದ ಸಿಂಹಾಸನಕ್ಕಾಗಿ ಜಗಳ ಮಾಡಿದರೆ?

**6** ದೇವವ್ರತ ಸ್ವಲ್ಪವೂ ಹಿಂಜರಿಯದೆ ಭೀಷಣ ಪ್ರತಿಜ್ಞೆ ಮಾಡಿದ.

ದಾಶರಾಜ, ನನ್ನ ಪಾಲಿಗೆ ತಂದೆಯೇ ದೇವರು. ನಿನ್ನ ಮಗಳು ಅವನ ಮಡದಿಯಾದಾಗ ಅವಳೂ ನನ್ನ ಪಾಲಿಗೆ ದೇವತೆಯಾಗುವಳು. ಇವರಿಬ್ಬರ ಮುಂದೆ ನಾನು ಪ್ರತಿಜ್ಞೆ ಮಾಡುತ್ತೇನೆ – ನಾನೆಂದಿಗೂ ಮದುವೆಯಾಗುವುದಿಲ್ಲ; ನಾನು ಬದುಕಿರುವವರೆಗೂ ಬ್ರಹ್ಮಚಾರಿಯಾಗಿಯೇ ಉಳಿಯುತ್ತೇನೆ. ಎಲ್ಲ ಸ್ತ್ರೀಯರೂ ನನಗೆ ಮಾತೃಸಮಾನರು. ಇದು ನಿಶ್ಚಯ!



ಓ ಯುವರಾಜ! ನಿನ್ನ ಪ್ರತಿಜ್ಞೆಯನ್ನು ಕೇಳಿ ನಾನು ಬೆರಗಾದೆ. ಈಗ ನಾನು ಪೂರ್ಣ ಮನಸ್ಸಿನಿಂದ ನನ್ನ ಮಗಳನ್ನು ನಿನ್ನ ತಂದೆಗೆ ಮದುವೆ ಮಾಡಿಕೊಡುತ್ತೇನೆ.

**7** ನಡೆದ ವಿಷಯವನ್ನೆಲ್ಲ ತಿಳಿದ ಶಂತನು ಮಹಾರಾಜನ ಹೃದಯ ಕರಗಿಹೋಯಿತು.

ಪ್ರಿಯಪುತ್ರ! ನಿನ್ನ ತ್ಯಾಗವನ್ನು ಕಂಡು ಕೇವಲ ಮಾನವರಷ್ಟೇ ಅಲ್ಲ, ದೇವತೆಗಳೂ ನಿನ್ನನ್ನು 'ಭೀಷ್ಮ'ನೆಂದು ಕೊಂಡಾಡುವರು. ನಿನಗೆ ನಾನು ಇಚ್ಛಾಮರಣವೆಂಬ ವರವನ್ನು ನೀಡುತ್ತೇನೆ. ಇದರಿಂದ ನೀನು ಇಚ್ಛೆ ಪಟ್ಟಾಗಲೇ ಮರಣವುಂಟಾಗುವುದು; ನೀನು ಬಯಸಿದಷ್ಟು ಕಾಲ ಬದುಕಿರಬಹುದು.



8 ಶಂತನು ಮಹಾರಾಜನಿಗೆ ಸತ್ಯವತಿಯಲ್ಲಿ ಇಬ್ಬರು ಮಕ್ಕಳು ಜನಿಸಿದರು. ಅವರೇ ಚಿತ್ರವೀರ್ಯ ಮತ್ತು ವಿಚಿತ್ರವೀರ್ಯ.

ಕೆಲವು ವರ್ಷಗಳ ನಂತರ ಶಂತನು ತೀರಿಕೊಂಡ. ಆಗ ಸತ್ಯವತಿ ಹೇಳಿದಳು –

ಭೀಷ್ಮ, ಈ ನನ್ನ ಮಕ್ಕಳಿಬ್ಬರನ್ನೂ ಸಾಕಿ ಸಲಹುವ ಹೊಣೆ ನಿನ್ನದು.



ಅಮ್ಮಾ, ನಿಮ್ಮ ಆಣತಿಯನ್ನು ನಾನು ಪಾಲಿಸುತ್ತೇನೆ. ಅವರು ಎಲ್ಲ ವಿದ್ಯೆಗಳಲ್ಲೂ ಪರಿಣತಿ ಹೊಂದುವರು. ಕಾಲಾನುಕ್ರಮದಲ್ಲಿ ನಾನು ಚಿತ್ರವೀರ್ಯನನ್ನು ರಾಜನನ್ನಾಗಿ ಮಾಡುತ್ತೇನೆ.

9 ಮುಂದೆ ಸರಿಯಾದ ಕಾಲಕ್ಕೆ ಚಿತ್ರವೀರ್ಯ ರಾಜನಾದ. ಆದರೆ ಅವನು ಯುದ್ಧದಲ್ಲಿ ವೀರಮರಣವನ್ನಪ್ಪಿದ. ಭೀಷ್ಮನು ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿದ. ಅವನಿಗೆ ಮದುವೆಯ ವಯಸ್ಸು ಬಂದಾಗ –

ಅಮ್ಮಾ, ಕಾಶೀರಾಜನು ಸ್ವಯಂವರವೊಂದನ್ನು ಏರ್ಪಡಿಸಿದ್ದಾನೆ. ಅವನ ಪುತ್ರಿಯರು ತಮಗೆ ಇಷ್ಟವಾದ ವರನನ್ನು ಆರಿಸಿಕೊಳ್ಳುತ್ತಾರೆ. ವಿಚಿತ್ರವೀರ್ಯನಿಗೆ ಮದುವೆ ಮಾಡಲು ಇದು ಒಳ್ಳೆಯ ಅವಕಾಶ. ನೀನು ಸಮ್ಮತಿಸಿದರೆ, ವಿಚಿತ್ರವೀರ್ಯನ ಪರವಾಗಿ ನಾನೇ ಸ್ವಯಂವರಕ್ಕೆ ಹೋಗುತ್ತೇನೆ.



ಹೋಗಿ ಬಾ ಮಗೂ. ನಿನಗೆ ಆಶೀರ್ವಾದ ಮಾಡುತ್ತೇನೆ.

10 ಸ್ವಯಂವರ ಮಂಟಪದಲ್ಲಿ ಭೀಷ್ಮನನ್ನು ನೋಡಿ ಎಲ್ಲರೂ ಬೆರಗಾದರು. ಭೀಷ್ಮನಿಗೆ ಕೇಳಿಸುವಂತೆ ಅವರೆಲ್ಲ ಹಾಸ್ಯ ಮಾಡತೊಡಗಿದರು.

ಮಹಾಜನರೆ, ನೀವೆಲ್ಲ ಹಾಸ್ಯ ಮಾಡುತ್ತಿದ್ದೀರಿ. ಇಲ್ಲಿಗೆ ನಾನು ನನ್ನ ಸಲುವಾಗಿ ಬರಲಿಲ್ಲ, ನನ್ನ ತಮ್ಮನಿಗಾಗಿ ಬಂದಿದ್ದೇನೆ. ಅವನು ಸೌಂದರ್ಯ, ವಿದ್ಯೆ, ಶೌರ್ಯಗಳಲ್ಲಿ ನಿಮ್ಮೆಲ್ಲರನ್ನೂ ಮೀರಿಸಿದ್ದಾನೆ. ಈ ರಾಜಕುಮಾರಿಯರನ್ನು ನಾನೀಗ ಅಪಹರಿಸುತ್ತೇನೆ. ಧೈರ್ಯವಿದ್ದರೆ ನನ್ನನ್ನು ತಡೆಯಿರಿ.



ಭೀಷ್ಮ! ನೀನೊಬ್ಬನೇ ಶೂರನೆಂದುಕೊಂಡಿದ್ದೀಯಾ? ನಾನು ಸಾಲ್ವ; ನಾನೂ ಯುದ್ಧ ಮಾಡಬಲ್ಲೆ. ಬಾ ಯುದ್ಧಕ್ಕೆ!

11 ಅಂಬೆ, ಅಂಬಿಕೆ, ಅಂಬಾಲಿಕೆ ಎಂಬ ಸ್ವಯಂವರದ ರಾಜಕುಮಾರಿಯರನ್ನು ರಥದಲ್ಲಿ ಕುಳ್ಳಿರಿಸಿದ ಭೀಷ್ಮ, ಸಾಲ್ವನೊಂದಿಗೆ ಯುದ್ಧ ಮಾಡಿ ಅವನನ್ನು ಸೋಲಿಸಿದ. ಆಗ ಅಂಬೆ ಭೀಷ್ಮನಿಗೆ ನಮಸ್ಕರಿಸುತ್ತ,




12 ಅಪಮಾನದಿಂದ ಕುಗ್ಗಿಹೋಗಿದ್ದ ಸಾಲ್ವನು ಅಂಬೆಯ ಮುಂದೆ ತಲೆತಗ್ಗಿಸಿದ.




13 ಭೀಷ್ಮನೂ ಅಂಬೆಯನ್ನು ಸ್ವೀಕರಿಸಲಿಲ್ಲ. ಅವಳು ರೋಷದಿಂದ ಭೀಷ್ಮನ ಗುರುವಾದ ಪರಶುರಾಮನ ಬಳಿಗೆ ಹೋದಳು. ಅವಳು ಭೀಷ್ಮನ ಮೇಲೆ ದೂರು ಹೇಳಿದಳು. ಪರಶುರಾಮನೇ ಭೀಷ್ಮನ ಬಳಿಗೆ ಬಂದು ಅಂಬೆಯನ್ನು ಮದುವೆಯಾಗುವಂತೆ ಆಜ್ಞಾಪಿಸಿದ. ಆದರು ಅದಕ್ಕೆ ಭೀಷ್ಮನು ಒಪ್ಪಲಿಲ್ಲ. ಕೊನೆಗೆ ಗುರು–ಶಿಷ್ಯರಾದ ಪರಶುರಾಮನಿಗೂ ಭೀಷ್ಮನಿಗೂ ಭೀಕರ ಯುದ್ಧ ನಡೆಯಿತು. ಪರಶುರಾಮನಿಗೆ ಭೀಷ್ಮನನ್ನು ಸೋಲಿಸಲಾಗಲಿಲ್ಲ. ಶಿಷ್ಯನ ಬಾಣ ತಗುಲಿ ಅವನು ಕೆಳಕ್ಕೆ ಬಿದ್ದ.




14 ವಿಚಿತ್ರವೀರ್ಯನ ಪತ್ನಿಯರಲ್ಲಿ ಅಂಬಿಕೆಯು ಅಂಧನಾದ ಧೃತರಾಷ್ಟ್ರನಿಗೂ, ಅಂಬಾಲಿಕೆಯು ಪಾಂಡುವಿಗೂ ಜನ್ಮವಿತ್ತರು.

# ಹಲಸೂರು ರಾಮಕೃಷ್ಣ ಮಠದ ಚಟುವಟಿಕೆಗಳು – ಒಂದು ವರದಿ

ಬೆಂಗಳೂರಿನ ಹಲಸೂರಿನಲ್ಲಿರುವ ರಾಮಕೃಷ್ಣ ಮಠವು ಪ್ರಧಾನವಾಗಿ ಹಿರಿಯ ಸಂನ್ಯಾಸಿಗಳು ವಿಶ್ರಾಂತ ಜೀವನವನ್ನು ನಡೆಸುವ ಒಂದು ಆಶ್ರಮವಾಗಿದೆ. ಅವರ ಅಮೂಲ್ಯ ಅನುಭವ, ಮಾರ್ಗದರ್ಶನಗಳಿಂದ ಆಧ್ಯಾತ್ಮಿಕ ಸಾಧಕರು ಹಲವು ಬಗೆಯ ಉಪಯೋಗ ಪಡೆಯುತ್ತಿದ್ದಾರೆ. ಇತರ ಚಟುವಟಿಕೆಗಳು:

**ಧಾರ್ಮಿಕ:** ನಿತ್ಯಪೂಜೆ, ಸಂಧ್ಯಾರತಿ, ಪ್ರತಿ ಏಕಾದಶಿ ದಿನಗಳಲ್ಲಿ ರಾಮನಾಮ ಸಂಕೀರ್ತನೆ, ಎಲ್ಲ ಪ್ರಮುಖ ಸಂತರ, ಮಹಾತ್ಮರ ಜನ್ಮದಿನಾಚರಣೆ, ಪ್ರತಿ ಶನಿವಾರ–ಭಾನುವಾರಗಳಂದು ವಾರದ ಪ್ರವಚನ ಹಾಗೂ ಧ್ಯಾನ ಶಿಬಿರ ಇವು ನಡೆಯುತ್ತವೆ.



**ಮೌಲ್ಯಶಿಕ್ಷಣ ಕಾರ್ಯಕ್ರಮಗಳು :**

**1. ಬಾಲಕ ಸಂಘ, ಬಾಲಕಿ ಸಂಘ, ತರುಣ ಸಂಘ ಮತ್ತು ಯುವಕ ಸಂಘ :** ಆಶ್ರಮದಲ್ಲಿ ಪ್ರತಿ ಭಾನುವಾರ **ಬಾಲಕ ಸಂಘ, ಬಾಲಕಿ ಸಂಘ** (8 ರಿಂದ 13 ರ ವರೆಗೆ ಬಾಲಕ–ಬಾಲಕಿಯರಿಗೆ ಪ್ರತ್ಯೇಕವಾಗಿ) ಹಾಗೂ **ತರುಣ ಸಂಘ** (14 ರಿಂದ 20 ವರ್ಷದ ತರುಣರಿಗಾಗಿ) ತರಗತಿಗಳನ್ನು ನಡೆಸುತ್ತಿದೆ. ಬಾಲಕ–ಬಾಲಕಿಯರಲ್ಲಿ ಚಾರಿತ್ರ್ಯನಿರ್ಮಾಣ ಮಾಡುವುದೇ ಈ ಕಾರ್ಯಕ್ರಮದ ಗುರಿ. ವೇದಮಂತ್ರ ಪಠಣ, ಯೋಗಾಸನ, ಸಂತರ ಜೀವನಕಥೆಗಳ ವಿವರಣೆ, ನೈತಿಕ ಶಿಕ್ಷಣ ಇದರಲ್ಲಿ ಸೇರಿದೆ.

**2. ಬೇಸಿಗೆ ಶಿಬಿರ :** ವರ್ಷದಲ್ಲಿ ಒಂದು ಬಾರಿ ನಡೆಯುವ ಈ ಶಿಬಿರದಲ್ಲಿ ಮಕ್ಕಳ ಜೀವನಕ್ಕೆ ಪೋಷಣೆ ನೀಡುವ, ಆರೋಗ್ಯವರ್ಧಕವಾದ ವಿಷಯಗಳಲ್ಲಿ ಆಸಕ್ತಿ ಮೂಡಿಸುವ ವಿವಿಧ ಕಾರ್ಯಕ್ರಮಗಳು ಇರುತ್ತವೆ. ವೇದಮಂತ್ರಪಠಣ, ಭಜನೆ, ಯೋಗಾಸನ; ಇದರೊಂದಿಗೆ ಭಾರತೀಯ ಸಾಂಸ್ಕೃತಿಕ ಪರಂಪರೆ, ವೇದಗಣಿತ, ಜ್ಞಾಪಕಶಕ್ತಿ ಹಾಗೂ ಏಕಾಗ್ರತೆ, ಕ್ರಿಯಾಕೌಶಲ್ಯ, ಕಾನೂನು ಪರಿಚಯ, ರಕ್ಷಣಾವ್ಯವಸ್ಥೆ, ವ್ಯಕ್ತಿತ್ವ ವಿಕಸನ ಹೀಗೆ ನೈತಿಕ ಸಾಮಾನ್ಯ ವಿಷಯಗಳಿಗೆ ಸಂಬಂಧಿಸಿದ ಪಾಠಗಳು; ದಿವ್ಯತ್ರಯರ ಜೀವನ ಹಾಗೂ ಉಪದೇಶಗಳನ್ನು ಕುರಿತಂತೆ ತರಬೇತಿ ನಡೆಯುವುದು.

**ಸೇವಾಕಾರ್ಯಗಳು :**

**1. ಆರೋಗ್ಯಕೇಂದ್ರ :** ಆಶ್ರಮದಲ್ಲಿರುವ ಆರೋಗ್ಯಕೇಂದ್ರವು ವಾರದ ಆರುದಿನವೂ ಕಾರ್ಯನಿರತವಾಗಿದೆ; ಇಡೀ ವರ್ಷ ಈ ಸೇವೆ ನಡೆಯುತ್ತಿದೆ. ರೋಗಿಗಳ ತಪಾಸಣೆ, ಚಿಕಿತ್ಸೆ ಹಾಗೂ ಔಷಧಿ ಉಚಿತ.

**2. ನೇತ್ರಚಿಕಿತ್ಸಾ ಶಿಬಿರಗಳು :** ನೇತ್ರಚಿಕಿತ್ಸಾ ಶಿಬಿರದಲ್ಲಿ ಬಡಜನರಿಗೆ ಉಚಿತ ಕ್ಯಾಟರಾಕ್ಟ್ ಶಸ್ತ್ರಚಿಕಿತ್ಸೆ ನಡೆಸಲಾಗುತ್ತಿದೆ. ವೃದ್ಧರಿಗೆ ಉಚಿತವಾಗಿ Intra Ocular Lens Implant ಮಾಡುವ ಮೂಲಕ ಅವರಿಗೆ ಸ್ವತಂತ್ರ ಜೀವನ ನಡೆಸಲು ಸಹಕಾರಿಯಾಗುವುದು. ವಿವರಗಳು:

- ಪ್ರತಿತಿಂಗಳು ನಗರ ಹಾಗೂ ಗ್ರಾಮೀಣ ಪ್ರದೇಶದ ವಿವಿಧ ಭಾಗಗಳಲ್ಲಿ ನೇತ್ರಚಿಕಿತ್ಸಾ ಶಿಬಿರಗಳು ನಡೆಯುತ್ತವೆ.
- ಕ್ಯಾಟರಾಕ್ಟ್ ಶಸ್ತ್ರಚಿಕಿತ್ಸೆ ಅಗತ್ಯವಿರುವ ರೋಗಿಗಳನ್ನು ಆಸ್ಪತ್ರೆಗೆ ಕರೆತರುವುದು, ಶಸ್ತ್ರಚಿಕಿತ್ಸೆ ನಡೆಸುವುದು ಹಾಗೂ ಮರಳಿ ಅವರನ್ನು ತಲುಪಿಸುವುದು.
- ಶಸ್ತ್ರಚಿಕಿತ್ಸೆ ನಡೆಸುವ ದಿನದಂದು ರೋಗಿಗಳಿಗೆ ಆಹಾರ ಹಾಗೂ ಆರಂಭಿಕ ಔಷಧಿಗಳನ್ನು ಒದಗಿಸಲಾಗುವುದು.
- ರೋಗಿಗಳಿಗೆ ಶಸ್ತ್ರಚಿಕಿತ್ಸೆ ನಡೆದ ಮರುದಿನ, ಮುಂದಿನ ವಾರ ಹಾಗೂ ಮುಂದಿನ ತಿಂಗಳಲ್ಲಿ ತಪಾಸಣೆ, ಪರೀಕ್ಷೆ ನಡೆಸಲಾಗುವುದು.



**3. ವಿವೇಕಾನಂದ ತರಬೇತಿ ಕೇಂದ್ರ : ನಗರ**

**ಹೆಸರು : ವಿವೇಕಾನಂದ ಕೋಚಿಂಗ್ ಸೆಂಟರ್**

**ಸ್ಥಳ : ವಿವೇಕಾನಂದ ಸೇವಾ ಚಿಕಿತ್ಸಾಲಯ, ರಾಮಕೃಷ್ಣ ಮಠ, ಸ್ವಾಮಿ ವಿವೇಕಾನಂದ ರಸ್ತೆ, ಹಲಸೂರು, ಬೆಂಗಳೂರ – 8**

ವಿದ್ಯಾರ್ಥಿಗಳ ಮನೋವಿಜ್ಞಾನವನ್ನು ಅಭ್ಯಸಿಸಿದ ನಂತರ ಶಾಲೆಗೆ ಹೋಗುವ ಮಕ್ಕಳಿಗೆ ಮನೆಪಾಠ ಅತ್ಯಗತ್ಯವೆನ್ನುವ ಅಂಶ ನಮಗೆ ಈ ಕಾರಣಗಳಿಂದ ಮನವರಿಕೆಯಾಗಿರುತ್ತದೆ :

- ಅನೇಕ ಕಾರಣಗಳಿಂದ ನಿಯಮಿತವಾಗಿ ಶಾಲೆಯಲ್ಲಿ ತರಗತಿಗಳು ನಡೆಯದಿರುವುದು.
- ಶಾಲೆಯ ಅಧ್ಯಾಪಕರುಗಳೇ ಟ್ಯೂಷನನ್ನು ಪುರಸ್ಕರಿಸುವುದು.
- ಟ್ಯೂಷನ್ ಇಲ್ಲದೆ ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತರಿಸಲಾಗದು ಎಂಬ ಮಾನಸಿಕ ಭಾವನೆ.
- ಅನೇಕರಿಗೆ ಬಡತನದಿಂದಾಗಿ ಟ್ಯೂಷನ್‌ಗೆ ಹೋಗಲು ಸಾಧ್ಯವಾಗದೆ ಇರುವುದು.
- ಮನೆಪಾಠಕ್ಕೆ ಹೋಗದಿರುವುದು ಅನೇಕರಿಗೆ ಕೀಳರಿಮೆ ಉಂಟು ಮಾಡುವುದು.

ಈ ಎಲ್ಲ ಅಂಶಗಳನ್ನು ಪರಿಗಣಿಸಿ, 8 ರಿಂದ 10 ನೇ ತರಗತಿಯಲ್ಲಿ ಕಲಿಯುವ ಸಮೀಪದ ವಿದ್ಯಾರ್ಥಿಗಳಿಗೆ ಆಶ್ರಮದ ಆವರಣದಲ್ಲಿ ಉಚಿತ ಟ್ಯೂಷನ್ ನಡೆಸಲು ತೀರ್ಮಾನಿಸಿದ್ದೇವೆ. ಈ ಮೂಲಕ ಬಡ ವಿದ್ಯಾರ್ಥಿಗಳ ಜೀವನದಲ್ಲಿ ನಿರ್ಣಾಯಕವೆನಿಸುವ ಪರೀಕ್ಷೆಗೆ ಸಹಾಯವಾಗುವಂತೆ ಆಶ್ರಮವು ಶೈಕ್ಷಣಿಕ ಸೇವಾಕಾರ್ಯವನ್ನು ಕೈಗೊಂಡಿದೆ.

**4. ಶಾಲಾ ಅಭಿವೃದ್ಧಿ ಕಾರ್ಯಕ್ರಮ :** ಶೈಕ್ಷಣಿಕ ಸೇವಾಕಾರ್ಯದ ಅಂಗವಾಗಿ, ಬೆಂಗಳೂರು ಸುತ್ತಮುತ್ತಲು ಇರುವ ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಕಲಿಯುವ ಸುಮಾರು 16,000 ಮಂದಿ ವಿದ್ಯಾರ್ಥಿಗಳಿಗೆ ನೋಟ್‌ಪುಸ್ತಕ, ಇತರ ಬರವಣಿಗೆಯ ವಸ್ತುಗಳನ್ನು ವಿತರಿಸಲಾಗಿದೆ. ಆಶ್ರಮವು ಕಳೆದ 8 ವರ್ಷಗಳಿಂದ ಈ ಕಾರ್ಯಕ್ರಮವನ್ನು ನಡೆಸುತ್ತಾ ಬಂದಿದೆ.

**5. ಅಭಿವೃದ್ಧಿ ಕಾರ್ಯ – ನಾರಾಯಣ ಸೇವೆ :**

**ಸೀರೆ ವಿತರಣೆ :** ಆಶ್ರಮವು ಪ್ರತಿವರ್ಷವೂ ಶ್ರೀಮಾತೆ ಶಾರದಾದೇವಿಯವರ ಜಯಂತಿಯಂದು ಸುಮಾರು 2000 ಮಂದಿ ಅರ್ಹ ಮಹಿಳೆಯರಿಗೆ ಸೀರೆ ವಿತರಣೆ ಮಾಡುತ್ತ ಬಂದಿದೆ.

**ಸ್ವಾಮಿ ತತ್ತ್ವರೂಪಾನಂದ**
**ಅಧ್ಯಕ್ಷರು**

Managing Editor : Swami Muktidananda Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಆಹ್ಲಾದಕರ ವಾತಾವರಣದಲ್ಲಿ ಪವಿತ್ರ ಪುಣ್ಯ ಕ್ಷೇತ್ರಗಳು ಹಾಗೂ ವರ್ಣರಂಜಿತ ನಯನ ಮನೋಹರ ಪ್ರೇಕ್ಷಣೀಯ ಸ್ಥಳಗಳ ಯಾತ್ರಾ ಪ್ರವಾಸ ಮಾಲಿಕೆ

**ಸುಸಜ್ಜಿತ ರೂಂ ವಸತಿ ಮತ್ತು ಊಟ ಉಪಚಾರದೊಂದಿಗೆ ರೈಲು ಹಾಗೂ ಲಕ್ಸುರಿ ಬಸ್ಸಿನಲ್ಲಿ**



## 01 ಶ್ರೀ ಅಷ್ಟ ವಿನಾಯಕ, ಶಿರಡಿ ಹಾಗೂ ಮಧ್ಯಪ್ರದೇಶ್ ಸ್ಪೆಷಲ್ ಪ್ರವಾಸ

ಗ್ವಾಲಿಯರ್ – ಝಾನ್ಸಿ – ಖಜರಹೋ–ಜಬ್ಬಲ್‌ಪುರ್–ಮಾರ್ಬಲ್‌ರಾಕ್ಸ್–
ಪಚ್‌ಮಾರ್ಹಿ–ಉಜ್ಜಯಿನಿ–ಇಂದೋರ್–ಮಾಹೇಶ್ವರ್–
ಓಂಕಾರೇಶ್ವರ್–ಶಿರಡಿ–ಪ್ರಖ್ಯಾತ ಅಷ್ಟ ವಿನಾಯಕ ಮಂದಿರಗಳು.



**ಹೊರಡುವ ದಿನಾಂಕ : 13-12-2014 ಮತ್ತು 1-2-2015 ರಿಂದ 18 ದಿನಗಳು**

## ಪಂಚರಾಮ ಮಂದಿರಗಳ ಸಹಿತ ಆಂಧ್ರಪ್ರದೇಶ್ ಸ್ಪೆಷಲ್



ವಿಜಯವಾಡ–ದ್ರಾಕ್ಷಾರಾಮ– ವಾಸವಿ ಪೆನಕೊಂಡ
ಪಿಠಾಪುರಂ–ಸಿಂಹಾಚಲಂ– ಶ್ರೀಕೂರ್ಮ –ಕ್ಷೇತ್ರ
ವಿಶಾಖಪಟ್ಟಣ – ಅನ್ನಾವರಂ– ರಾಜಮಂಡ್ರಿ
(ಗೋದಾವರಿ ಬೋಟಿಂಗ್)–ಭದ್ರಾಚಲಂ –ಅಮರಾವತಿ – ಕನಕದುರ್ಗ



**ಹೊರಡುವ ದಿನಾಂಕ : 13-12-2014, 20-2-2015, 25-2-2015 ರಿಂದ 10 ದಿನಗಳು**



## ಮಾತೃಗಯ ಸಹಿತ ಪ್ರತ್ಯೇಕ ಗುಜರಾತ್ ಪ್ರವಾಸ – 10 ದಿನಗಳು

ಅಹಮದಾಬಾದ್ – ಮಾತೃಗಯಾ–ಸೋಮನಾಥ್–ದ್ವಾರಕಾ
ಬೇಟ್ ದ್ವಾರಕಾ – ನಾಗೇಶಂ – ಪೋರ್ ಬಂದರ್ – ಅಹಮದಾಬಾದ್



**ಹೊರಡುವ ದಿನಾಂಕ : 13-12-2014, 20-12-2014, 1-2-2015 ರಿಂದ 10 ದಿನಗಳು**

## ಕರ್ನಾಟಕ ವಿಶೇಷ ಪ್ರವಾಸ

ಕೆಮ್ಮಣ್ಣುಗುಂಡಿ – ಶಿವಮೊಗ್ಗ–ತ್ಯಾವರೆಕೊಪ್ಪ–ಸಿಂಹಧಾಮ – ಸಕ್ರೆಬೈಲು–ಮಂಡಗದ್ದೆ
ಪಕ್ಷಿಧಾಮ – ವರದಹಳ್ಳಿ – ಜೋಗ್‌ಫಾಲ್ಸ್ – ಸೋಂದಾ –ಸಹಸ್ರಲಿಂಗ–
ಮಾರಿಕಾಂಬ–ಗೋಕರ್ಣ–ಮುರುಡೇಶ್ವರ–ಇಡಗುಂಜಿ–ಕೊಲ್ಲೂರು–ಶೃಂಗೇರಿ



**ಹೊರಡುವ ದಿನಾಂಕ : 13-12-2014, 20-12-2014, ರಿಂದ 7 ದಿನಗಳು**

## ಮಾಘ ಸ್ನಾನ ಹಾಗೂ ಶಿವರಾತ್ರಿ ಪ್ರಯುಕ್ತ

ಅಲಹಾಬಾದ್–ಚಿತ್ರಕೂಟ–ನೈಮಿಷಾರಣ್ಯ–ಅಯೋಧ್ಯ–ನೇಪಾಳ–ಮನೋಕಾಮನ
ಕಾಶಿ–ಗಯಾ–ಪುರಿ–ಕೋನಾರ್ಕ್–ಭುವನೇಶ್ವರ್



**ಹೊರಡುವ ದಿನಾಂಕ : 9-2-2015 ರಿಂದ 18 ದಿನಗಳು**



ವಿವರಗಳಿಗೆ ಹಾಗೂ ರಿಜರ್ವೇಷನ್ನಿಗೆ ಕೂಡಲೇ ಸಂಪರ್ಕಿಸಿ

# ಶ್ರೀ ಚೈತನ್ಯ ಟ್ರಾವೆಲ್ಸ್



(ಕರ್ನಾಟಕ ಸರ್ಕಾರದ ಪ್ರವಾಸೋದ್ಯಮ ಇಲಾಖೆಯಿಂದ ಮಾನ್ಯತೆ ಪಡೆದಿದೆ)

ನಂ.2/4, ಜಾನಕೀರಾಮ್ ಕಾಂಪ್ಲೆಕ್ಸ್, ಬಸವನಗುಡಿ ರಸ್ತೆ, (ಉಮಾ ಟಾಕೀಸ್ ಹತ್ತಿರ) ಚಾಮರಾಜಪೇಟೆ, ಬೆಂಗಳೂರು–560 018.

ದೂರವಾಣಿ : 2650 8925, 2667 4860 *Email : chaitanyayatra@yahoo.com*

VIVEKA PRABHA (KANNADA MONTHLY)
October 2014, Vol.15, No.10, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/2012-14. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore